ಶ್ರೀಗುರು ಬಸವಲಿಂಗಾಯನಮಃ

ಕನ್ನಡ ವಾಙ್ಮಯ ಸೇವಾಸಕ್ತರಿಗಾಗಿ

# ತೊರವೆ

# ರಾಮಾಯಣ ಸಾರಸಂಗ್ರಹ



ಇದು

ಪ್ರಭುಲಿಂಗಲೀಲೆ, ಗುರುಧರ್ಮನಿರೂಪಣೆ, ವೀರಶೈವರಲ್ಲಿ ಜಾತಿಭೇದಗಳಿಲ್ಲ, ಶ್ರೀಗುರುಬಸವಣ್ಣನೇ ವೀರಶೈವ ಮತ ಸಂಸ್ಥಾಪನಾ ಚಾರ್ಯ, ಶ್ರೀಕೊಟ್ಟೂರು ಬಸವೇಶ್ವರ ವಿಜಯ, ಮುಂತಾದವುಗಳನ್ನು ಬರೆದು ಪ್ರಸಿದ್ಧ ಪಡಿಸಿದ—

**ವೀರಪ್ಪ ಬಸವಪ್ಪ ಬಿಳಿಅಂಗಡಿ,** ಬಿ ಎ ಎಲ್. ಎಲ್ ಬಿ
**ಹುಬ್ಬಳ್ಳಿ** ಇವರಿಂದ ಸಂಗೃಹೀತವಾದುದು

(ಪ್ರಥಮ ಮುದ್ರಣ ೨೦೦೦ ಪ್ರತಿಗಳು)



**ಮಲ್ಲಿಕಾರ್ಜುನ ಪ್ರಿಂಟಿಂಗ ವರ್ಕ್ಸ, ಹುಬ್ಬಳ್ಳಿ**
ಇವರಲ್ಲಿ ಮುದ್ರಿತವಾಗಿದೆ.
೧೯೩೯

**ಹುಬ್ಬಳ್ಳಿ** **ಬೆಲೆ ಹತ್ತಾಣೆ.**

ಇದನ್ನು ಮಲ್ಲಿಕಾರ್ಜುನ ಪ್ರಿಂಟಿಂಗ ವರ್ಕ್ಸ, ಹುಬ್ಬಳ್ಳಿ
ಇವರಲ್ಲಿ ಅಚ್ಚುಹಾಕಿಸಿ ಹುಬ್ಬಳ್ಳಿ ಬಮ್ಮಾಪೂರ ಲಿಂಗನಪೇಟಿಯಲ್ಲಿರುವ
ತನ್ನ ೬೭೬ ಮನಿಯಲ್ಲಿ ಸಂಗ್ರಹಕಾರನು ಪಸಿದ್ಧಮಾಡಿದನು.

# ಸಂಗ್ರಾಹಕನ ಮೊದಲನುಡಿ.

ಕೆಲವು ವೀರಶೈವ ವಾಙ್ಮಯ ಗ್ರಂಥಗಳನ್ನು ಪರಿಶೀಲಿಸುವಾಗ, ಜೈಮಿನಿಭಾರತ, ತೊರವೆ ರಾಮಾಯಣ ಗ್ರಂಥಗಳನ್ನೋದಬೇಕೆಂಬ ಬಲವತ್ತರವಾದ ಲವಲವಿಕೆಯು ಈ ಗ್ರಂಥಸಂಗ್ರಾಹಕನಲ್ಲುಂಟಾಗಲು, ತದನುಸಾರವಾಗಿ ಆತನು ಮೊದಲು ಕನ್ನಡನುಡಿಯ ಲಾಲಿತ್ಯಸೇವನೆಗಾಗಿ ಜೈಮಿನಿಭಾರತವನ್ನು ಓದಿ ಮುಗಿಸಿದನು. ನಂತರ ತೊರವೆ ರಾಮಾಯಣವನ್ನು ಓದಿಕೊಂಡನು. ಲಕ್ಷ್ಮೀಶಕವಿಯ ಜೈಮಿನಿ ಭಾರತವು ಭಾಷಾ ಸೌಷ್ಟವದಲ್ಲಿಯೂ ತೊರವೆ ರಾಮಾಯಣಕಿಂತಲೂ ಮಿಗಿಲಾದದು. ತೊರವೆ ರಾಮಾಣವು ಸರಸಪದಗಳಿಂದಲೂ, ಸುಗಮ ವಾಕ್ಯಾರ್ಥಗಳಿಂದಲೂ, ನೀತಿಪ್ರಧಾನವಾದ ಪದ್ಯಗಳಿಂದಲೂ ಶೋಭಿಸುತ್ತದೆ. ಈ ಗ್ರಂಥವನ್ನು ಸಮಗ್ರವಾಗಿ ಓದಿದವರು ಬಹು ವಿರಳವೆಂದು ಈತನ ಮತ. ಹೇಗಾದರೂ ಕಷ್ಟಬಟ್ಟು ೫೦೭೯ ಪದ್ಯಗಳನ್ನು ಓದಿ ಮುಗಿಸಲಾಯಿತು. ಇಂತಹ ಕಾವ್ಯನಾಗರದ ಬುಡದಲ್ಲಿ ಹೂಳಿದ್ದ ರತ್ನಗಳನ್ನು ಮೇಲಕ್ಕೆ ತೆಗೆದು, ಕನ್ನಡನುಡಿಯ ಸೊಬಗನ್ನು ಸವಿಕಟ್ಟನ್ನು ಕರ್ನಾಟಕ ಬಾಲ ಬಾಲಿಕೆಯರಿಗೂ, ಸಾಹಿತ್ಯಸೇವಕರಿಗೂ ಮನವಣಿವಂತೆ ಉಣಿಸಿ ತಣಿಸಿಬಿಡಬೇಕೆಂಬ ಸಂಕಲ್ಪವು ಆತನ ಬಗೆಯಲ್ಲಿ ಹೊಳೆಯಲು ಅದಕ್ಕನುಗುಣವಾಗಿ ತೊರವೆ ರಾಮಾಯಣ ಸಾರಸಂಗ್ರಹವೆಂಬ ಒಳ್ಪೆಸರನ್ನಿಟ್ಟು, ಬೇರೆ ಬೇರೆ ನೀತಿಯನುಸುರುವ ಹದಿನೈದು ಪಾಠಗಳನ್ನು ಅಡಕಿಡಲಾಗಿದೆ.

It is said that music is one of the three things, which bring humanity nearer to divinity. The other two are art and literature''. ಅಂದರೆ ಗಾಯನವು ಬಲತ ಕಲೆಯೂ ಸಾಹಿತ್ಯವೂ ಮಾನವ ಕೋಟಿಯನ್ನು ಶಿವನ ಸನಿಹಕ್ಕೊಯ್ಯುವ ಸಾಧನಗಳೆಂದು ಅನುಭವಿಗಳು ಹೇಳುವರು. ಈ ರಾಮಾ

(೧೩) (ಅ) ನೀತಿ ಸೂಚಕ ಪದಗಳು
(ಬ) ಮತ್ತು ವಿಪ್ರರು ಕ್ಷಾತ್ರಧರ್ಮಕ್ಕೆ ಅನಧಿಕಾರಿಗಳು ಎಂಬ ಬಗ್ಗೆ

(೧೪) ರಾಮ ರಾವಣರ ಅಸದೃಶ ಯುದ್ಧ. ರಾವಣನ ಸಂಹಾರ.

(೧೫) ಸೀತೆಯಂ ರಾಮನು ಅಗ್ನಿ ಮುಖದಲ್ಲಿ ಸ್ವೀಕರಿಸುವನು. ವಿಭೀಷಣನ ಪಟ್ಟಾಬಿಷೇಕ. ಎಲ್ಲರೂ ಮರಳಿ ಅಯೋಧ್ಯೆಗೆ ಬರುವರು.

## ಕಠಿಣ ಶಬ್ದಗಳ ಅರ್ಥ.

# ತೊರವೆ ರಾಮಾಯಣ ಸಾರ ಸಂಗ್ರಹ

# ೧ನೆಯ ಪಾಠ

## ಸೀತಾ ರಾಮ ಲಕ್ಷ್ಮಣರ ವನವಾಸ ಸ್ವೀಕಾರ.

[ಒಂದಾನೊಂದು ಸಮಯದಲ್ಲಿ ಭರತನ ತಾಯಿಯಾದ ಕೈಕೆಯು ತನ್ನ ಗಂಡನಾದ ದಶರಥನಿಂದ ತನ್ನ ಮಗನಾದ ಭರತನು ಪಟ್ಟಾಭಿಷಕ್ತನಾಗಬೇಕು.—ರಾಮನು ಹನ್ನೆರಡು ವರುಷ ವನವಾಸ ಭೋಗಿಸಬೇಕು ಎಂಬುದಕ್ಕೆ ಒಪ್ಪಿಗೆಯನ್ನು ಪಡೆದುಕೊಂಡಿದ್ದಳು. ಆ ಒಪ್ಪಿಗೆಯಂತೆ ರಾಮನನ್ನು ವನವಾಸಕ್ಕಟ್ಟುವಳು. ಆ ಸಂದರ್ಭದಲ್ಲಿ ರಾಮನ ಪಿತೃವಾಕ್ಯ ಪರಿಪಾಲನೆ, ಲಕ್ಷ್ಮಣನ ನಿಸ್ಸೀಮ ಸಹೋದರ ಭಾವ, ಸೀತೆಯ ಪತಿವ್ರತಾ ಧರ್ಮ, ಮತ್ತು ದಶರಥನ ಪುತ್ರ ವಾತ್ಸಲ್ಯ, ಅರಮನೆಯಲ್ಲಿ ಮತ್ತು ರಾಜ್ಯದಲ್ಲಿ ಶಾಂತಿ ಹಬ್ಬಲೆಂದು ರಾಮನು ತೋರಿಸಿದ ಮಹತ್ತರವಾದ ಸ್ವಾರ್ಥ ತ್ಯಾಗ ಇವೆಲ್ಲ ಕೆಳಗಿನ ಶ್ಲೋಕಗಳಿಂದ ವ್ಯಕ್ತವಾಗುವವು.]

ರಾಮ— ಭರತನಾಳಲಿ ರಾಜ್ಯವನು ನೀವ್ ।
ನರಪತಿಯ ಚರಣಾರವಿಂದದ ।
ಪರಮಸೇವಾ ನಿರತರಾಗಿರಿ ನಿಮ್ಮನುಜ್ಞೆಯಲಿ ॥
ಚರಿಸುವೆನು ವನವಾಸವನು ಗೋ ।
ಚರಿಸುವೆನು ನೀವ್‌ನುಡಿದ ವರುಷದ ।
ಪರಿಗಣದ ಪರಿಯಂತವೆಂದನು ಕೈಕೆಗಾರಾಮ ॥ ॥೧॥

ಲಕ್ಷ್ಮಣ— ಧರಣಿ ಜೇಶನ ಮುತ್ತಿಕೊಂಡಿಹ ।
ನೆರವಿಗರ ಹ್ಯೊ ಹ್ಯೊ ಯೆನುತಸರ ।
ಸರಿಸಿಬಂದನು ರಾಘವೇಂದ್ರನ ಬಳಿಗೆ ಸೌಮಿತ್ರಿ ॥
ಮರುಳುತನ ನಿಮಗುಂಟೆ ಬಿಡಿಬೇ ।
ರರಸರುಂಟೇ ಧರೆಗೆನುತ ರಘು ।
ವರನ ಜನನಿಯ ಜರಿದು ಜಾನಕಿಯರಸಗಿಂತೆಂದ॥ ॥೨॥

ರಾಮ— ತಮ್ಮ ಸೈರಿಸು ಸೈರಿಸೀಮಾ ।
ತೆಮ್ಮ ವಂಶಕೆ ಸಲ್ಲದಾಸುರ ।
ಕರ್ಮವಿದು ಸತ್ಯ ಪ್ರತಿಜ್ಞತೆಗುಚಿತವೇ ಹೇಳು ॥
ಉಮ್ಮಳಿಸುವರು ಸುರರ ಸಭೆಯೊಳ ॥
ಗೆಮ್ಮರಾಯರು ಪಿತನ ಸತ್ಯದೆ ।
ಸೊಂಮನಳಿದರೆ ಬಳಿಕ ಬಹುದಪಕೀರ್ತಿ ನಮಗೆಂದ ॥ ॥೩॥

ವೇದ ಮತವಿದು ಜಗಕೆ ಸೂನೃತ ।
ವಾದಿಯೇ ಸಾಕ್ಷಾತ ಶಿವನೋ ।
ಪಾದಿ ಸತ್ಯ ವಿಹೀನನೇ ತಾನರಕ ಭಾಜನನೆ ॥
ಶೋಧಿ ಸೈಲೇಸಾಗಿ ಪಿತೃವಚ ।
ನೋದಯವ ನೆಲೆ ತಮ್ಮಮ ।
ಹಾದುರಾಗ್ರಹ ತಾರದಿರದಪದೆಸೆಯ ನಮಗೆಂದ ॥ ॥೪॥

ಕಾಲವಾವುದು ನೋಡು ನೆರದಿಹ ।
ಮೇಲಣ ವರಾರೀಕ್ಷಿಸನೃತಕೆ ।
ಸೋಲ ಲಹುದೇ ತಮ್ಮ ತಂದೆಯ ಮಾತನತಿಗಳೆದು ॥
ಮೇಲೆ ಕಾಂಬೈಶ್ವರ್ಯಕಿದುತಾ ।
ಕೀಳು ಮಾಡದೆ ನಮ್ಮ ನೀ ಜನ ।
ಜಾಲ ನಗುವುದು ಪಿತನನುಜ್ಞೆಯೆ ರಾಜಪದವೆಂದ ॥ ॥೫॥

ಎಂದು ತಮ್ಮನ ಧರ್ಮ ಪದ್ಧತಿ ।
ಯಿಂದ ಚಿತ್ತವ ತಿಳುಹಿ ಬಳಿಕಿಂ ।
ತೆಂದನಯ್ಯನ ಸೇವೆಯಲಿ ಮಾತೃಗಳ ಭಕ್ತಿಯಲಿ ॥
ಸಂದಿಹುದು ಕೇಳಣುಗ ಭರತನು ।
ಬಂದಡಾತನ ಕೂಡಿಕೊಂಡಿಹು ।
ದೆಂದು ಶೋಕವ ನಿಳುಹಿ ಸಂತೈಸಿದನು ಸಹ ಭವನ ॥ ॥೬॥

ಲಕ್ಷ್ಮಣ— ದೇವ ಬಿನ್ನಹ ನಿಮ್ಮ ಪದರಾ ।
ಜೀವದೋಲಗ ತಪ್ಪಿ ಜೀವಿಪ ।
ಜೀವವಿದು ತಾನಿದ್ದು ಫಲವೇ ನೀಧರಿತ್ರಿಯಲಿ ॥
ದೇವ ತನ್ನಯ ಮೇಲೆ ನಿಮ್ಮಕೃ ।
ಪಾವಲಂಬನವಾಗಲುಳಿವುದು ।
ಜೀವವಿದು ವಲ್ಕಲವ ನೆನಗಿತ್ತುಳುಹಬೇಕೆಂದ ॥ ॥೭॥

ರಾಮ— ಭರತ ನಿಲ್ಲೀ ಸಮಯದಲಿದು ॥
ಸ್ಥಿರನು ತಾತನಃ ತಮ್ಮ ಕೇಳೀ ।
ದುರುಳುತನ ಬೇಡಧಿಕೃತದು ನಾವ್ವೈಸಲೇ ವನಕೆ ॥
ಹಿರಿದು ಬರಬೇಕಾದಡವನಿಯ ।
ಭರತಗೊಪ್ಪಿಸಿ ಪಿತನನುಜ್ಞೆಯ ।
ಧರಿಸಿ ಬೀಳ್ಕೊಳು ನಮ್ಮೆಡೆಗೆಂದನಾರಾಮ॥ ॥೮॥

ಅರಸಿಮನದಲಿ ಹರುಷಿಸಿದಳಿ ।
ಬ್ಬರಿಗೆ ವನವಾಯ್ತೆಂದು ಕಿರುನಗೆ ।
ವೆರಿಸಿಕೊಟ್ಟಳು ಮತ್ತೆಮನುವಂಶಂಗೆ ವಲ್ಕಲವ ॥
ಸರಸರಸಿ ಶಶಿವದನೆ ಸಭೆಯಲಿ ।
ಭರವನವಲ್ಕೈತಂದು ರಾಮನ ।
ಚರಣದಲಿ ಚಾಜಿದಳು ಭಾಳವ ಭಕ್ತಿಭಾವದಲಿ ॥ ॥೯॥

ಸೀತೆ— ದೇವ ಬಿನ್ನಹ ನಿಮ್ಮ ದೇಹವ ।
ಮೈವಳಿಯ ನೆಳಲಾಗಿ ನೀವೇ ।
ಭಾವಿಸುವದುರೆ ಬೇರೆ ತನಗನ್ಯತ್ರ ಗತಿಯುಂಟೆ ॥
ಹೂವ ಸುರಭಿಸುಧಾಂಶುಬಿಂಬವ ।
ನಾವಿಮಳರುಚಿ ಕೀರ್ತಿಸದ್ವ ।
ರ್ಮಾವಳಿಯ ಬಿಟ್ಟಿರಲು ಬಲ್ಲುವೆ ಯೆಂದಳಾಸೀತೆ ॥ ॥೧೦॥

ರಾಮ— ಬೇಡನೀಸುಕುಮಾರಿ ನಮ್ಮೊಡ ।
ನಾಡುವದು ಕಡುಕಷ್ಟಕಾನನ ।
ವಾಡುವರು ನಿನ್ನವರು ನಮ್ಮನು ದೂರದಿರ್ದಪರೆ ॥
ಬೇಡ ನೀ ನೀ ಮಾತ ನಮ್ಮೊಡ ।
ನಾಡದಿರು ಕೌಸಲೆಯ ಸೇವೆಯ ।
ಮಾಡಿಕೊಂಡಿರು ಸಾಕು ಬಂದವಳೆಂದ ನವನಿಜೆಯ ॥ ॥೧೧॥

ಹಸಿದಡಿಲ್ಯಮೃತಾನ್ನಚಯ ಪವ ।
ಡಿಸುವಡಿಲ್ಲ ಮೃದು ಸ್ತರಣದಿಂ ।
ದೆಸೆವಮಣಿ ಪರಿಯಂಕ ವಿಹಡಿಲ್ಲಲ್ಲಿ ಮಣಿ ಭವನ ॥
ಬಿಸಿಲು ಮಳೆ ಛಳಿಗಳಿಗೆ ಸಲೆಸೈ ।
ರಿಸುವ ದೇಹವೆ ನಿನ್ನದಿದುದೀ ।
ವಸಿಕೆಗಾವಂಜುವೆವು ಕೆಲಸಾರೆಂದನಾರಾಮ ॥ ॥೧೨॥

ಸೀತೆ— ಪತಿಯ ಸುಖದುಃಖಗಳೊಳಗನು ।
ಗತೆಯೆನಿಸದವಳಾವ ಲೋಕದ ।
ಗತಿಯ ನೈದುವ ಳೆಂಬುದನು ನೀವೇ ವಿಚಾರದಲಿ ॥
ಶ್ರುತಿಗೆ ಕೊರತೆಯ ತಾರದಿದ್ದ ।
ಸ್ಥಿತಿಯಲೇ ಕರುಣಿಸುವದೆಂದ ।
ಚ್ಯುತನ ನೊಡಬಡಿಸಿದಳು ಪತಿಭಜನಾನುರಾಗದಲಿ ॥ ॥೧೩॥

ಕೌಸಲೆ— ಹಸುಳೆಗಾಯ್ತೆ ವಿಪತ್ತಕಟಸವ ।
ನಿಸಿತೆ ಸುಕುಮಾರಿಗೆ ವನಾಂತರ ।
ವಸತಿ ಸಂಭವಿಸಿತ್ತೆಶಿಶುವಿಗೆ ವನಪರಿಭ್ರಮಣ ।
ದಶರಥನ ಸೊಸೆಯಾಗಿ ಜನಕನ ।
ಬಸುರಿನಿಂಬಂದುಂಣದೀಯಾ ।
ಯಸಕೆಸಂದೌ ತಾಯೆ ಯೆಂದಳು ಕೌಸಲಾದೇವಿ ॥ ॥೧೪॥

ಆಮೇಲೆ— ಉಟ್ಟನೀತನು ಬಿಗಿದುಸರಗಿಯು ।
ಕಟ್ಟಿಕಟಿಯಲಿ ತಿರುಗಿ ತನ್ನೊಡ ।
ಹುಟ್ಟಿದನಿನೀಕ್ಷಿಸಲು ತಂದನು ಚಾಪಮಾರ್ಗಣವ ॥
ಪಟ್ಟದರಸಿಗೆ ಪೊಡವಿಯೊಳ್ಪೊಡ ।
ಮಟ್ಟು ಗುರುಪದಕಭಿನಮಿಸಿ ಪೊರ ।
ಮಟ್ಟನಾವೈದೇಹಿಸಹಿತರಮನೆಯನಾರಾಮ ॥ ॥೧೫॥

ಸುಮಿತ್ರೆ— ಅನುಜನಾಕ್ರಮದಿಂದ ಸಂಧಿಸಿ ।
ಜನನಿಯನು ಬೀಳ್ಕೊಡೆ ಸುಮಿತ್ರಾ ।
ವನಿತೆನುಡಿದಳು ಕಂದಕೇಳೈ ರಾಘವೇಶ್ವರನ ॥
ಜನಪದಶರಥನಂತೆ ಕಾಂಬುದು ।
ಜನಕಜೆಯ ನೆನ್ನಂತೆಕಾಂಬುದು ।
ವನವಯೋಧ್ಯೆಯೆಂದು ಬಗೆನಡೆಯೆಂದಳಾಕಾಂತೆ ॥ ॥೧೬॥

ಆಸುಮಿತ್ರಾದೇವಿ ನಡೆತಂ ।
ದಾಸರೋಜಾಂಬಕನ ಕೈಯಲಿ ।
ಸೂಸುವಶ್ರುಗಳಿಂದ ಕೊಟ್ಟಳು ತನ್ನನಂದನನ ॥
ಧಾಶರಥಿಕೇಳ್ತರಳನಿವನತಿ ।
ರೋಷಗರ್ವಿತನೀತನಲಿಗುಣ ।
ದೋಷವನು ಭಾವಿಸದೆ ಸಲಹೆಂದಿತ್ತಳರ್ಭಕನ ॥ ॥೧೭॥

## ರಾಮನು ಅಯೊಧ್ಯೆಯಂಬಿಡುವಾಗ ದಶರಥನು ಮಾಡಿದ ಆಳಾಪ—

ದಶರಥ— ತೆರಳುತಿದೆಮಜ್ಜೀವ ರತ್ನಾ ।
ಭರಣವೆನ್ನ ಮನೋರಥದ ಸಿರಿ ।
ಸರಿವುತಿದೆ ರಘುರಾಜವಂಶದ ಬಹಳಭಾಗ್ಯನಿಧಿ ॥

ಪುರವಹೊರವಡುತಿದೆ ಮದೀಯ ।
ಸ್ಫುರಿತಚಂದ್ರಮಕಲ್ಪಪಾದಪ ।
ಹರುಷನಿರ್ಝರಧೇನು ಬಿಡುತಿದೆ ತನ್ನನಕಟಿಂದಾ ॥ ॥೧೮॥

ಅಕಟಸೆಳೆದರೊ ಜೀರ್ಣದೇಹಾಂ ।
ಧಕನ ಹಸ್ತದಯಷ್ಟಿಯನುಕೌ ।
ಳಿಕವ ತೋರಿದನೇ ವಿಧಾತ್ರನು ಪುತ್ರಮೋಹಕದ ॥
ಸುಕೃತಹೀನರು ವಾವಲೇವಾ ।
ರ್ಧಿಕದೊಳಾದುದೆ ಸುತವಿಯೋಗ ।
ಪ್ರಕಟಪಾತಕಫಲವೆನುತ ಮೊರೆಯಿಟ್ಟನಾಭೂಪ ॥ ॥೧೯॥

ಕೌಸಲೆ— ನಿಲಿಸಾಗದೆ ತಂದೆಗಳಿರಿಭ ।
ಕಳಭನನು ಹರಿಪೋತನನು ಮಂ ।
ಜುಳಮನೋಜಾತನನು ಮನ್ಮುಖ ರತ್ನಮುಕುರವನು ।
ನಿಲಿಸಿರ್ಪೈ ನೀವೆನುತಕೌಸಲೆ ।
ಕಳಲಿಸಿದ ಮುಡಿಯಿಂದಕಂಬನಿ ।
ದುಡುಕೆ ಕೆಲಬಲಕಳವಳಿವುತೊರಲಿದಳುದೆಸೆದೆಸೆಗೆ ॥ ॥೨೦॥

ಬಿಟ್ಟುಕಳದೈ ಮಗನೆನಮ್ಮನು ।
ಒಟ್ಟಿ ಬಯಲೊಳಗಿರಿಸಿದೈ ಹೊರ ।
ಗಟ್ಟಿದೈ ಕಾಡ್ಗಿಚ್ಚಿನಲಿ ಕಾಮೋಷ್ಟಿಯಲಿಪಡೆದ ॥
ಹೊಟ್ಟೆಬರುದೊರೆಯಾಯಿತೇಕಂ ।
ಗೆಟ್ಟಿನೈ ಎಲೆಕಂದ ಹಾಯೆಂ ।
ದೊಟ್ಟಿಲೊದರಿದಳಬಲೆ ಕಂಬನಿದುಂಬೆಪೌರಜನ ॥ ॥೨೧॥

ಇರಿಸಿಯೋಹರೆಕಂದ ಜವ್ವನ ।
ಜರಿವ ಜನನಿಯನುಜನಕರನುನಿ ।
ನ್ನರಿತಕೆಮುತ್ತಾಗುಣವೆ ಪಿತೃಸೇವಾಪ್ರಸಿದ್ಧನಿಗೆ ॥

ಕರಗದಕಟಾ ಚಿತ್ತವೆಮ್ಮ ।
ಬ್ಬರನು ಬಿಟ್ಟೈದುವರೆ ಹೇಳೈ ।
ತರುಣನಮಗಿನ್ನೇನು ಗತಿಯೆಂದೊದರಿದಳುಕಾಂತೆ ॥ ॥೭॥

ಆರನೋಡಿದಡವರು ಲೋಚನ ।
ವಾರಿ ಧಾರಾಗಳಿತಗದ್ಗದ ।
ಪೂರಣದ ಕಂಧರವಕರಪಲ್ಲವದಗಲ್ಲದಲಿ ॥
ಊರಹೊರಹೊಂಟನುನರೇಂದ್ರನ ।
ಪೌರಜನ ಬಿಡಲಾರದಾರಘು ।
ವೀರನನು ವಿಶ್ರುತಸುಧಾರ್ಮಿಕ ಸಾರ್ವಭೌಮನನು ॥ ॥೮॥



## ೨ನೆಯ ಪಾಠ

## ಭರತನು ರಾಮನನ್ನು ಕಂಡು ರಾಜ್ಯವಾಳಲು ಬರಬೇಕೆಂದು ಬೇಡಿಕೊಳ್ಳುವನು.

[ರಾಮಾದಿಗಳು ಅರಣ್ಯಕ್ಕೆ ಹೊರಟ ಬಳಿಕ ದಶರಥನ ಮಂತ್ರಿ ವಶಿಷ್ಠ ಮೊದಲಾದವರು ಲೇಖವಾಹಕರನ್ನು ಎಲ್ಲ ಕಡೆಗೂ ಅಟ್ಟಿ ಭರತನನ್ನು ಅಯೋಧ್ಯೆಗೆ ಬರಮಾಡಿಕೊಳ್ಳುವರು. ಭರತನು ತನ್ನ ತಾಯಿಂದಾದ ಅನರ್ಥವನ್ನು ಕಂಡು ಸಿಟ್ಟಾಗಿ ಅವಳನ್ನು ಖಡ್ಗದಿಂದಿರಿಯ ಹೋಗುವನು. ಅಷ್ಟರಲ್ಲಿ ವಶಿಷ್ಠನು ಅವನ ಕೈಯ ಹಿಡಿದು ಅವನಿಗೆ ಬುದ್ಧಿಮಾತನ್ನು ಹೇಳಿ ಸಮಾಧಾನ ಪಡಿಸಿದ ನಂತರ ಭರತನೂ, ಕೈಕೆಯೂ, ಮಂತ್ರಿಗಳೂ ಕೆಲವು ಸೈನ್ಯದೊಂದಿಗೆ

ರಮುನನ್ನು ಹುಡುಕಲಿಕ್ಕೆ ಹೊರಡುವರು. ಅವರೆಲ್ಲ ಭಾರದ್ವಾಜನಾಶ್ರಮಕ್ಕೆ ಬಂದು ಅಲ್ಲಿಂದ ರಾಮನಿರುವ ಚಿತ್ರಕೂಟಗಿರಿಗೆ ಬರುವರು. ಭರತನು ಬಹು ದೈನ್ಯದಿಂದ ರಾಮನಿಗೆ ಅಯೋಧ್ಯೆಗೆ ಬಂದು ರಾಜ್ಯವಾಳಬೇಕೆಂದು ಬೇಡಿಕೊಳ್ಳುವನು. ಭರತನ ಅನುಪಮ ಭ್ರಾತೃಪ್ರೇಮ ನಿಸ್ಸ್ವಾರ್ಥ ಭಾವನೆ ಕೈಕೆಯ ಪಶ್ಚಾತ್ತಾಪ ಮೊದಲಾದವು ಕೆಳಗಿನ ಶ್ಲೋಕಗಳಿಂದ ವ್ಯಕ್ತವಾಗುವವು.]

ಲವನೆಕೇಳಾ ದಿನವನಾದಳ ।
ಭವನವಲಿ ನೂಕಿದರು ಮರುದಿನ ।
ವವನಿಪತಿಗಾಭರತಭಯಭಕ್ತಿಯಲಿ ಕೈಮುಗಿದು ॥
ಅವಧರಿಸು ರಾಜೇಂದ್ರವಸುಧಾ।
ಯುವತಿಗರಸಾಗೇಳುರಕ್ಷಿಸು ।
ಭುವನಜನವನು ಕೃಪೆಯಮಾಡೆಂದೆರಗಿದನುಪದಕೆ ॥೧॥

ತಂದೆಯಡಗಿದ ಬಳಿಕನೀನೇ ।
ತಂದೆತಾಯನಗವನಿಜಾತೆಯು ।
ಸಂದಿಸುವರೆ ಮನವಮಕ್ಕಳಮರೆಯುವಾತೇನು ॥
ಇಂದು ನೀನರಸಾಗದಿರೆ ತಂ ।
ಮಂದಿರಲಿ ತಾನೊಬ್ಬ ನಿನಗಿ ।
ಲ್ಲೆಂದು ಚಿತ್ತೈಸುವದೆನುತಬಿನ್ನೈಸಿದನು ಭರತ ॥ ॥೨॥

ಒಡನೆಭರತನ ಬಿನ್ನಹಕೆಮೈ ।
ಗೊಡುವದೆಂದು ಸುಮಂತ್ರ ನಂಘ್ರಿಯ ।
ಹಿಡಿದನುಚಿತವಿದೆಂದು ಕೈಮುಗಿದನು ವಶಿಷ್ಟಮುನಿ ॥
ಬಿಡಿಸಿದನು ಬಳಿಕವರ ವರಮನ ।
ದೊಡಕನನುಪಮನೀತಿಶಾಸ್ತ್ರದ ।
ಸಡಗರದ ಸತ್ಯವೃತಾಗಮದನುನಯೋಕ್ತಿಯಲಿ ॥ ॥೩॥

ಬಂದು ಕೈಕಾದೇವಿ ಕಂಬನಿ ।
ಯಿಂದಮನದನುತಾಪಶಿಖಿಯಲಿ ।
ಬೆಂದು ಬಳಿಕೀಮಾತನುಡಿದಳು ಚಿತ್ತಶುದ್ಧಿಯಲಿ ॥
ಹಿಂದೆ ನೆನದದಪಕೃತವ ನೆರೆಮರ ।
ದಿಂದುಪಾಲಿಸು ಧರೆಯ ಕೇಳೆಲೆ ।
ಕಂದಯೆನುತಪ್ಪಿದಳು ಶಿರವನು ರಾಘವೇಶ್ವರನ ॥೪॥

ರಾಮ— ನಿಮ್ಮಮಾತನು ಮಿಾರಲಾಪೆನು ।
ನೊಮ್ಮೆನಾನೆಲೆ ತಾಯೆನಿಜಪಿತ।
ನುಮ್ಮಳಿಸದಿರನಾಜ್ಞೆಯನು ಮಿಾರಿದನುಮಗನೆಂದು ॥
ನಮ್ಮ ಪಾಡೇನಾದಿಯವನೀ ।
ಹಮ್ಮಿಕಾರರು ಸತ್ಯಮಾರ್ಗವ ।
ನೆಮ್ಮಿದವರೇ ನಪ್ರಬುದ್ಧರೆ ಯೆಂದನಾರಾಮ ॥ ॥೫॥

ಕಳುಹಿದನು ಕೈಮುಗಿದು ಮುನಿಕುಲ ।
ತಿಲಕನನು ಬಳಿಕಾಸುಮಂತ್ರನ ।
ನೊಲಿದುಮನ್ನಿಸಿ ಬೀಳುಕೊಟ್ಟನು ನಮಿಸಿಜನನಿಯರ ॥
ಹಲವು ನಯನೀತಿಯಲಿ ಚಿತ್ತದ ।
ಕಲುಷವನು ಕೆಲಚಾಚಿನಗರಕೆ ।
ಕಳುಹಿದನು ಕರುಣದಲಿ ಕೈಕಾಸತಿಯನಂದನನ ॥ ॥೬॥

ಭರತ— ಆದಡೆಲೆರಾಜೇಂದ್ರನಿಮ್ಮಯ ।
ಪಾದುಕೆಯುಚಿತ್ತೈಸಿದೇವರ ।
ಪಾದವೆಂದೇ ಕಂಡುಸೇವೆಯಮಾಡಿಕೊಂಡಿಹೆನು ॥
ಕಾದಿಹೆನು ಹದಿನಾಲ್ಕುವರುಷವು ।
ಮೇದಿನಿಯ ನೀವ್ ಬಾರದಿರಲು ನಿ ।
ವೇದಿಸುವೆನೀತನುವನನಲಂಗೆಂದನಾಭರತ ॥ ॥೭॥

## ೩ನೆಯ ಪಾಠ

## ರಾವಣಾಸುರನಿಂದ ಸೀತಾಪಹರಣ—ಸೀತೆಯಾಳಾಪ

[ರಾಮ ಲಕ್ಷ್ಮಣರಿಲ್ಲದ ಹೊತ್ತುಸಾಧಿಸಿ ರಾವಣನು ಕಪಟಮುನಿ ವೇಷಧರಿಸಿ ಸೀತೆಯಡೆಗೆ ಬಂದು ಅವಳಂ ಮೋಸಗೊಳಿಸಿ ಬಲಾತ್ಕಾರದಿಂದ ಒಯ್ದನು. ರಾವಣನ ಸಂಬಂಧಿಕಳಾದ ಶೂರ್ಪಣಖಿಯು ರಾಮ ಲಕ್ಷ್ಮಣರನ್ನು ಕಾಮಕೇಳಿಗಾಗಿ ಅಂಡಲೆಯಲು, ಅವರು ಅವಳ ಮೂಗು ಕಿವಿಗಳನ್ನು ಕತ್ತರಿಸಿ ಕಳಿಸಿದರು. ಶೂರ್ಪಣಖಿಯು ತನಗಾದ ಅಪಮಾನವನ್ನು ರಾವಣನಿಗೆ ದೂರಿಡಲು, ಆತನು ಕೋಪಿಷ್ಟನಾಗಿ ಇದರ ಸೇಡು ತೀರಿಸಿಕೊಳ್ಳಬೇಕೆಂದು ಯೋಚಿಸಿ, ಒಂದು ಮಾಯಾಮೃಗವನ್ನು ರಚಿಸಿ ಸೀತೆಯ ಮುಂದೆ ಆಡುವದಕ್ಕಾಗಿ ಬಿಡಲು, ಅದಕ್ಕೆ ಸೀತೆಯು ಮೋಹಿಸಿ ಅದನ್ನು ತನಗೆ ಕೊಡಬೇಕೆಂದು ರಾಮನಿಗೆ ತಿಳಿಸುವಳು. ಲಕ್ಷ್ಮಣನು ಅದು ಮಾಯಾಮೃಗವೆಂದು ಎಷ್ಟು ಹೇಳಿದರೂ ಸೀತೆಯ ಆಗ್ರಹದಮೂಲಕ ಅದರ ಬೆನ್ನಟ್ಟಿ ಹೋಗುವನು. ಬಹಳ ಹೊತ್ತಾದರೂ ತಿರುಗಿ ರಾಮನು ಬಾರದ್ದರಿಂದ ಸೀತೆಯು ರಾಮನನ್ನು ಕರೆತರುವದಕ್ಕಾಗಿ ಲಕ್ಷ್ಮಣನನ್ನು ಅಟ್ಟಿದಳು. ಲಕ್ಷ್ಮಣನು ತಾನು ಸೀತೆಯಂ ಬಿಟ್ಟು ಹೋಗುವಾಗ, ಅಲ್ಲಿಯ ದೇವತೆಗಳಿಗೆ ಪಶುಪಕ್ಷಿಗಳಿಗೆ ಸೀತೆಯಂ ರಕ್ಷಿಸರೆಂದು ಬೇಡಿಕೊಳ್ಳುವನು. ಆಮೇಲೆ ರಾಮನ ಶೋಧಕ್ಕಾಗಿ ಹೊರಟುಹೋದಕೂಡಲೆ, ಏಕಾಕಿಯಾಗಿದ್ದ ಸೀತೆಯ ಬಳಿಗೆ ರಾವಣನು ಯತಿ ವೇಷಧರಿಸಿ ಬಂದು, ಅವಳಿಂದ ಉಪಚಾರ ಹೊಂದಿ, ಕಾಮ ವಾಸನೆಯಿಂದ ಪ್ರೇರಿತನಾಗಿ ಅವಳನ್ನು ತನ್ನ ರಥದಲ್ಲಿ ಎತ್ತಿಹಾಕಿಕೊಂಡು ಒಯ್ಯುವನು.]

ಶಿರದಮುಂಡದದಕ್ಷಮಾಲೆಯ ।
ಕರದದಂಡಕಮಂಡಲದ ಬಂ ।
ಧುರದ ಕಾಷಾಂಬರದ ಕೌಪೀನದ ಕಳೇಬರದ ॥
ಜರೆಯ ಜರುಗಿದ ಬೆನ್ನಿನಲುಗುವ ।
ಶಿರದ ಶೂಲಿಯ ಸಟೆಯನಾಮ ।
ಸ್ಮರಣೆಯಲಿ ನೈದೋರಿದನು ಮಾಯಾ ಮಹೀಸುತೆಗೆ ॥೧॥

ಇದೆ ದಿಳೀಪಾನ್ವಯನ ವಿಶ್ರುತ ।
ಸದನ ವಿಪ್ರಪ್ರಿಯನ ಗೃಹಮಿಂ ।
ತಿದೆ ಮಹಾಧಾರ್ಮಿಕನ ಪುಣ್ಯಾಶ್ರಮ ವಿದೇಯೆನುತ ॥
ಮುದದ ತುದಿಯಲಿ ತೋರುತಿಪ್ಪಾ ॥
ಪದದ ವೊಲು ಪುಣ್ಯಾಂಗನೆಯ ನಘ ।
ಹೃದಯ ನೈದಿದನವರಸಂಧ್ಯಾಸಮಯದಗ್ರದಲಿ ॥ ॥೨॥

ಮಾತಿದೆಲ್ಲಿಯದೆನುತಬಾಗಿಲ ।
ಲಾತಪೋಧನ ವೇಷದಲಿಕಾ ।
ಮಾತುರನಕಪಟಾನ್ವಿತನಕಡುನರಕಭಾಜಕನ ॥
ಪಾತಕನ ಪರಿಯರಿಯದಾಭೂ ।
ಜಾತೆಯತಿಯೆಂದೇಬಗೆದು ಸಂ ।
ಪ್ರೀತಿವಚನದಲಸುರ ಮುನಿಗಿಂತೆಂದಳುಚಿತದಲಿ ॥ ॥೩॥

ಆವಕಡೆ ನಿಜವಾಸದೇಶವ ।
ದಾವುದಮಳಕ್ಷೇತ್ರತೀರ್ಥದ ।
ಠಾವುತಾ ನಿಮಗೆಲ್ಲಿ ನಮ್ಮಾಶ್ರಮಕೆಬರವೇನು ॥
ನೀವು ವೃದ್ಧರು ನಿಮಗೆಶುಶ್ರೂ ।
ಷಾವಲಂಬನ ವಿಲ್ಲವೆಂದತಿ ।
ಭಾವಭಕ್ತಿಯಲುಪಚರಿಸಿದಳು ಕಪಟತಾಪಸನ ॥ ॥೪॥

ವಾಸವೆಮಗೇನಿದ್ದುದುತ್ತರ ।
ವಾಸವಾಜನದು ಚರಿಯದಿಂ ।
ದೀಶರೀರವ ಸಲಹುವೆವು ಪ್ರಾರಬ್ಧ ಫಲವಿಡಿದು ॥
ದೇಶ ದೇಶವ ತೊಳಲಿದೆವುಹಿಂ ।
ದೀಸುದಿನ ವಿನ್ನೊಂದುಲಂಕಾ ।
ದೇಶವಿದೆ ಸಂಕಲ್ಪಸೀಮೆಗೆ ಕಾಂತೆಕೇಳೆಂದ ॥ ॥೫॥

ಗಮನವಲ್ಲಿಗೆ ಗಮಿಸಿದರೆನಾವ್।
ಸುಮನಸರಿಗಿಂದಧಿಕ ಕೇಳೆಲೆ।
ಕಮಲಮುಖಿ ಕಾಮ್ಯಾರ್ಥವಿದು ಸಮನಿಸೆಕೃತಾರ್ಥರಲ॥
ಶ್ರಮುವಳಿಮುದಿಂದಿನಲಿ ನಿಮ್ಮಾ ।
ಶ್ರಮಕೆ ಬಂದುದರಿಂದ ನೀನು ।
ತ್ರಮೆಯಲಾ ಪ್ರಿಯವಿದ್ದುದೆಂಮಯಮೋಲೆನಿಮಗೆಂದ ॥೬॥

ಎನುತಕಂಗಳಹರಹಿದನು ಕಾ ।
ಮಿನಿಯ ಕೋಮಲಕಾಯದಲಿ ತನು ।
ಮನಸಿಜಗೆ ಗುರಿಯಾಯ್ತು ಕಳವಳಿಸಿದವುಕರಣಚಯ ॥
ನೆನಹಿನನುರಾಗಕೆ ಧರತ್ರೀ ।
ತನುಜೆಯಲಿ ನೆಲೆಯಾಯ್ತುಯೋಗದ ।
ಜಿನುಗುಜಾರಿತು ಜಪದಜಿಹ್ವೆಗೆ ಜಾಡ್ಯತನವಾಯ್ತು ॥ ॥೭॥

ಅಡಗಿತಾಕ್ಷಣದಂಡಮೆಲ್ಲನೆ ।
ಸಡಲಿಹೊದ್ದಿತು ಕರಕಮಂಡಲ ।
ಮಿಡುಕು ನಿಂದುದು ಬೆರಳನಾಮಸ್ಮರಣೆಗಳುಹರನ ॥
ಸಿಡಿದುಜಾರಿತು ಜಡೆಯಜಾಡ್ಯದ ।
ತೊಡರುಹರಿದುವಯೋವಿಲಾಸದ ।
ಜಡೆಯುತಾಪಸಗಾಗೆ ಮನದಲಿ ಹೆದರಿದಳುಸೀತೆ ॥ ॥೮॥

ಮರಳಿ ಮರಳಿಮನೋವಿಕಾರದ ।
ಹರಹುಗುಂದದೆ ದೇವಿಯರ ಸೌಂ ।
ದರಿಯದಂಗೋಪಾಂಗದಲಿಹರಹಿದನು ಕಣ್ಮನವ ||
ಅರರೆಮನ್ಮಥ ಸೀಸತಿಯುಲವ ।
ತರಸಿದನೊ ಶಿವಯೆನುತಮಾನವಲಿ ।
ಮರುಳುಗೊಂಡನು ಮೃತ್ಯು ವೆಂಬುದನರಿಯದವಬಳಿಕ ||೯||

ರಾವಣ— ಎಲೆಪಯೋಧರಭಾರೆಶಶಿಮುಂ ।
ಡಲನಿಭಾನನೆ ಪೀನಜಘನ ।
ಸ್ಥಳಿಸರೋರುಹನಯನೆ ಸಿಂಧುರಗಮನೆ ಶುಕವಚನೆ ॥
ಲಲಿತಚಂದನಗಂಧಿಕೇಳೀ ।
ಗಳು ಮಹಾಮಾರೀಚನೆಂಬ ।
ಗ್ಗಳದ ಮಾಯಾಮೃಗದಲಳಿದನು ರಾಮನೆಂಬನೃಪ ॥ ॥೧೦॥

ಏಳುತವನಾಬಿಕ್ಷುವೇಷವ ।
ಬೀಳುಕೊಟ್ಟನು ತೋರಿದನುದಶ ।
ಮೌಳಿಗಳಮದದುಬ್ಬು ಗೊಬ್ಬಿನ ಬಾಹುದಂಡಗಳ ॥
ನೀಲಮೇಘನಿಭಾಂಗದೊಲುದಂ ।
ಷ್ಟ್ರಾಳಿಗಳ ಮಣಿಕಾಂಚನದ ಮಕು ।
ಟಾಳಿಗಳವಿವಿಧಾಭರಣದಭಿನವದರೂಪಕದ ॥ ||೧೧||

ನಳಿನಮುಖಿಕೇಳಿನ್ನು ಭುವನಾ ।
ವಳಿಗಳೆನ್ನವು ಸಕಲದಿವಿಜಾ ।
ವಳಿಗಳೆನ್ನಯಬಂಟರುರ್ವಸಿ ಮುಖ್ಯಸುರಕುಲದ ।
ಲಲನೆಯರು ತೊತ್ತಿರು ಸುರೇಂದ್ರನ ।
ಹೊಳಲಸುರತರು ಕಾಮಧೇನುಗ ।
ಳೊಳಗುಗೊಟ್ಟಿಹವೆನಗೆ ತನ್ನಯಹೆಸರಕೇಳೆಂದ ॥ ||೧೨||

ಚಂಡವಿಕ್ರಮನುರುತ್ರಿಲೋಕದ ।
ಗಂಡ ರಾವಣನೆಂಬಜಗದು ।
ದ್ದಂಡವೆನ್ನೈಶ್ವರ್ಯಕಜಹರಿಹರರುಪಾಡಲ್ಲ ॥
ಕಂಡೆನೆನ್ನದೆ ಕಾಣೆನೆನ್ನದೆ ।
ಗುಂಡಶೌರ್ಯನ ನೋಡುನಿನಗಾ ।
ದಂಡಿಯುಳ್ಳವನೇ ವಿವೇಕಕೆ ಮನವಮಾಡೆಂದ ॥ ॥೧೩॥

ಪುರುಷರೊಳಗುತ್ತಮನು ನಾನ್ವರ ।
ತರುಣಿಯರೊಳಗುತ್ತಮೆಕಣಾನೀ ।
ಸುರನರೋರಗಲೋಕದೊಳಗಿದು ಸುಪ್ರಸಿದ್ಧಕಣಾ ॥
ನಾನೆ ಸಾಕ್ಷಾತ್ ಸ್ಮರಕಣಾನೀ ।
ಮರುಳುವಮಾತಿನ್ನೇಕೆ ನಡೆಸಂ।
ಕರದಸಂಶಯವಿನ್ನದೇಕೆ ಲತಾಂಗಿಕೇಳೆಂದ । ॥೧೪॥

ಸೀತೆ— ಎಲವೊ ಪಾತಕಹೊಲೆಯ ಹೊರವಡು ।
ತಲೆಗಳಿವು ಯಿನ್ನುಳಿವುದಿಲ್ಲ ।
ಗ್ಗಳೆಯ ದೈವವ ಕೆಣಕೆ ನೀರಲಿನೆರದೆಹೋಗೆನುತ ॥
ನಳಿನಮುಖಿ ಹಲವಂಗದಲಿಬೈ ।
ದೊಳಗುಗೊಡದಿರೆ ಕೋಪವಲಿಕಳ ।
ವಳಿಸಿ ಕಾಂತೆಯಕಬರಿಯನುಹಿಡಿದೆಳೆದನಂಗನೆಯ॥ ॥೧೫॥

ಬೇಡ ಬೇಡೆಂಬಂತೆ ಮರನ ।
ಲ್ಲಾಡುತಿರ್ದುದುನೆರದುದು ಖಗಕುಲ ।
ವೀಡಿರಿದು ನೆರದರಚಿಹೊಯ್ದುವು ಖಳನಮಸ್ತಕವ ॥
ನೋಡದವನವಶಕುನಮುಖದಲಿ ।
ಜೋಡಿಸಿದನೆಳದೊಯ್ದುರಥದಲಿ ।
ಕೂಡೆ ಹಾಹಾಕ್ರಂದನಧ್ವನಿ ತುಂಬಿತಂಬರವ ॥ ॥೧೬॥

## —:ಸೀತೆಯಾಳಾಪ:—

ಶಳವುತಿದೆ ಕಾಡ್ಗಿಚ್ಚು ಕಡುಕೋ ।
ಮಲದಲತೆಯನು ಕೊರಳಹಿಡಿದೆಳ ।
ದುಲಿವುತಿದೆಹೆಬ್ಬುಲಿ ಸುಧೇನುವನಕಟ ಬಲುಕರಿಸಿ ॥
ಬಳಲುತಿದೆ ದುಷ್ಕೀರ್ತಿಕೀರ್ತಿಯ ।
ನೆಲೆರಘುಕ್ಷಿತಿನಾಥ ಬಿಡಿಸೈ ।
ಖಳನಶರೆಯಂಗನೆಯ ನೆಂದೊರಳಿದಳುನಳಿನಾಕ್ಷಿ ॥ ॥೧೭॥

ರಾಮಬಿಡಿಸೈ ಖಳನಕುಲಸ್ಮರ ।
ಭೀಮಬಿಡಿಸೈರಾಕ್ಷಸಾನ್ವಯ ।
ಸಾಮಸಂಭವ ಸಂದಳನ ಕಂಠೀರವನೆಬಿಡಿಸು ॥
ತಾಮಸನ ತಲೆಗಡಿದುಭೂತ ।
ಸ್ತೋಮಕುಣಬಡಿಸೈ ನಿಶಾಚರ ।
ಕಾಮುಕನಕೈಶೆರೆಯ ಬಿಡಿಸೆಂದೊರಳಿದಳುಸೀತೆ ॥ ॥೧೮॥

ಕೇಳದಿಹುದುಚಿತವೆ ರಘುಕ್ಷಿತಿ ।
ಪಾಲ ನಿನ್ನಂಗನೆಯ ಭಂಗದ ।
ಮೇಲಹುಯ್ಯಲು ಕೇಳ್ದುಮನುಕುಲದವರಕೊರತೆಗಳ ॥
ತಾಳುವರೆಸೈರಿಸುವರೇದು ।
ಶ್ರೀಲಚರಿತನನೂರ್ಮಿಳಾವರ ।
ಲೋಲನಿನಗೇಕಕಟ ನಿಷ್ಕೃಪೆಯೆಂದಳಬುಜಾಕ್ಷಿ ॥ ॥೧೯॥

ಜರದುಕಳುಹಿದಳೆಂದು ಮನದಲಿ ।
ಕಲುಬುತನವನು ಮಾಡೆ ಯೆಲೆಧಿಟ ।
ಕೊರತೆಬಾರದೆ ನಿನಗೆ ಕುಲದಭಿಮಾನಭಂಗದಲಿ ॥

ಉಳಿಸಲಹುದೈ ತಂದೆ ರಘುಕುಲ ।
ದೆರೆಯನನ್ಯನೆ ನಿನಗೆಸೀತೆಯ ।
ಶರೆಯಬಿಡಿಸೈ ತಂದೆ ಯೆಂದೊರಳಿದಳುನಳಿನಾಕ್ಷಿ ॥ ॥೨೦॥

ಎಲೆವಸಂತನೆ ಚಂದ್ರಮನೆ ಚಾ ।
ಪಲಚಕೋರಿಯೆ ಮಾರುತನೆ ಮಾಂ ।
ದಳಿರೆ ಮನ್ಮಥನೇಮದಾಳಿಯೆ ಮತ್ತಕೋಕಿಲನೆ ।
ಕುಲಯುತೆಯ ಕುಂಭಿಣಿಯ ತನುಜೆಯ ।
ಕಲುಷರಹಿತೆಯ ಖಳಕುಲಾಧಮ ।
ಬಲುಕರಿಸಿ ಕೊಂಡೊಯ್ದನೆಂದುಸುರುವುದು ರಾಮಂಗೆ ॥೨೧॥

ಬೇಡಿಕೊಂಬೆನು ನಿಮ್ಮ ನೀವ್ ಕೃಪೆ ।
ಮಾಡಲಾಗದೆಮಾನ್ಯರಲಿ ಮಾ ।
ತಾಡಲಾಗದೆ ಸಕಲವನದೇವತೆಗಳಿರಪತಿಗೆ ॥
ಮಾಡಿತಿಲ್ಲಪರಾಧವನು ಹರಿ ।
ಕ್ರೋಡಖಡ್ಗಿಕುರಂಗಿನಳಿರೆಲೆ ।
ನಾಡೊಡೆಯರಾಮಂಗೆ ಹೇಳುವದೆಂದಳಾಸೀತೆ ॥ ॥೨೨॥

ದಶವರೂಥ ಮಹಾಮಹೀಶನ ।
ಸೊಸೆಯ ಜನಕನಮಗಳರಾಮನ ।
ಶಶಿಮುಖಿಯನಪ್ರತಿಮ ಲಕ್ಷ್ಮಣದೇವನತ್ತಿಗೆಯ ॥
ಅಸುರವಂಶಾಧಮನು ದುಷ್ಟ ।
ವ್ಯಸನಿ ದುರಿತ ದುರಾತ್ಮನಡವಿಯೊ ।
ಳಸವಳಿಸಿಕೊಂಡೊಯ್ದನೆಂದುಸುರುವುದು ರಾಮಂಗೆ ॥ ॥೨೩॥

ಜಟಾಯು:—ಎಲವೊ ರಾವಣ ಬೇಡ ಬಿಡುಮೈ ।
ಥಿಲಿಯನನ್ಯವಧೂವ್ಯಸನದಲಿ ।
ಸಿಲುಕಿಸಿತ್ತಪಕೀರ್ತಿ ಕಮಲಜನುಸುರುಹನ್ನಬರ ॥

ತೊಲಗಲರಿಯದು ಮೇಲೆನಿನ್ನಯ ।
ಬಳಗವೆಲ್ಲವಕೊಂದು ದುರ್ಗತಿ ।
ಗಿಳಿಯಬೇಡಕಟಕಟ ಬಿಡುಸಾರಿದೆನುನಿನಗೆಂದ ॥ ॥೨೪॥

ರಾವಣ— ಕೇಳಿದ್ಯೆ ಖಗರಾಜ ಖಡುಗದ ।
ಮೇಲೆ ಬಹರಾವ್ಯೆಸೆ ಕಲುಷಿತ ।
ದಾಲಯಕೆನಾವಂಜೆವಳುಪಿದ ಬಳಿಕ ಪರಸತಿಗೆ ॥
ಕೋಳುಹೋಗಲಿ ಕೀರ್ತಿಬಿಡೆನೀ ।
ಬಾಲಿಕಿಯನಿದು ಸುಪ್ರಸಿದ್ಧಸು ।
ರಾಲಯವು ನಿನಗೆನುತ ಖಳನೆರಗಿದನು ಖಗಪತಿಯ ॥೨೫॥



# ೪ನೆಯ ಪಾಠ

# ಸೀತಾಪಹರಣದಿಂದ ರಾಮನ ಹಲುಬು

[ರಾಮನ ಶೋಧನಕ್ಕಾಗಿ ಹೋದಲಕ್ಷ್ಮಣನು ರಾಮನನ್ನು ಹುಡುಕಿ ಪಂಚವಟೀ ಆಶ್ರಮಕ್ಕೆ ಕರಕೊಂಡು ಬರಲು ಅಲ್ಲಿ ರಾಮನು ಸೀತೆಯಂಕಾಣದೆ ಹಲವಂಗದಲಿ ಹಲುಬುವನು.]

ರಾಮ— ಎಲೆಸುಮಿತ್ರಾಸೂನುಸೀತೆಯ ।
ಸುಳಿವು ನಿಳಯದೊಳಿಲ್ಲದಿದೆ ಕಂ ।
ಬೆಳಕು ಕಾಣಿಸದಿದೆಮದೀಯ ವಿಶಾಲಭವನದಲಿ ॥
ಲಲಿತದರಹಸಿತಾನನಾಬ್ಜಾ ।
ಕಲಿತನಾನಾಶ್ವಾಸಪರಿಮಳ ।
ಸುಳಿಯದಿದೆ ಸೀತೆಯನು ತೋರ್ಪೆ ತಮ್ಮತನಗೆಂದ ॥ ॥೧॥

ತೋರದಿದೆಕಲಹಂಸಗಮನೆಯ ।
ತೋರಿಕೆಯಗತಿಕಂಗಳಿಗೆ ನ್ಯೈ ।
ದೋರದಿದೆ ಲಾವಣ್ಯರುಚಿ ಹಿಮರುಚಿನಿಭಾನನೆಯ ॥
ಬೀರದಿದೆಸೌಭಾಗ್ಯಸಾರದ ।
ಸೀರೆಸೊಬಗಿನಶಿರಿಯದೇನ್ಯೈ ।
ಮಾರುಮಾತಿಲ್ಲೇಕೆಹೇಳೈ ತಮ್ಮನನಗೆಂದ ॥ ॥೨॥

ಕನಕಮೃಗವನು ತಾರೆನೆಂಬೀ ।
ಮುನಿಸಿದೊಂದಿದೆ ತಮ್ಮತನ್ನಯ ।
ಮನದ ಸಂಶಯವನು ನಿವಾರಿಸುಹೋಗು ಗುಹಾಂತರವ ॥
ಕನಕಮೃಗವನು ತಂದೆನೆಂವೇ ।
ವನಿತೆಗನೃತವನುನುಡಿದು ಸೀತೆಯ ।
ನೆನಗೆತೋರ್ರೈಸಾಕು ಬಳಿಕಕೃತಾರ್ಥ ತಾನೆಂದ ॥ ೩॥

ಲಕ್ಷ್ಮಣ— ಭ್ರಮಿಸಿತೀತನಮತಿವಿವೇಕದ ।
ಸಮತೆಸಡಲಿತು ಸ್ವೈರಣೆಯನಾ ।
ಕ್ರಮಿಸಿದುದು ಮತಿಕಳವಳಿಸಿದವು ಕರಣವಂಗದಲಿ ॥
ವಿಮುಖವಾಯ್ತುರಿವಕಟಸೀತಾ ।
ರಮೆಪಲಾಯನವಾಗದಿರಳೆಂ ।
ದಮರಿದನು ತಾಪಸದಲಿ ಲಕ್ಷ್ಮಣಹೊಕ್ಕನೆಲೆವನೆಯ ॥ ॥೪॥

ರಾಮ— ಎಲೆಸುಮಿತ್ರಾಸೂನುಕೇಳೀ ।
ನಿಳಯದೊಳಗಿಲ್ಲವನಿಸುತೆ ನೀ ।
ತಿಳಿದುಕೋಮನೆಯಲ್ಲ ವಿದುನಾವ್‌ತಪ್ಪಿಬಾರೆವಲೆ ॥
ನಿಳಯವಿದುತಾನಮ್ಮದಾವಡೆ ।
ಸುಳಿಯದಿಹಳೇಸೀತೆ ನೀನ ।
ಸ್ಖಲಿತಮೂರ್ಖನಲಾಮತಿಭ್ರಮೆಯಾಯ್ತು ನಿನಗೆಂದ ॥ ॥೫॥

ಲಕ್ಷ್ಮಣ— ಅಹುದು ಜೀಯ ಮದೀಯಪೂರ್ವದ ।
ಗೃಹವು ಧಿಟಧಿಟವೆಂಬೆನಲುನಿಜ ।
ರಾಮ— ವಹುದುಸೀತೆಯತೋರಿದರೆ ನೀನೆಂದನುಡಿನಮಗೆ ॥
ಸಹಜನೀಲಕ್ಷ್ಮಣನೊ ಕಪಟದ ।
ಸಹಭವನೊ ನೀನಾರುಸತ್ಯದ ।
ಲಿ ಹಿಮಕರಕುಲದವರವೊಲು ನಿರ್ಧರಿಸಿಹೇಳೆಂದ ॥ ॥೬॥

ಲಕ್ಷ್ಮಣ— ದೇವರೊಡಹುಟ್ಟಿದನು ತಾನಹು ।
ದಾವಸಂಶಯವಿಲ್ಲವೆನೆನಿಜ ।
ರಾಮ— ವೇ ವಿದೇಹಕುಮಾರಿಯನುನಾವ್ ನಮ್ಮಪುರದಿಂದ ॥
ಈವಿಪಿನಕೊಡಗೊಂಡುಬಂದೆವೊ ।
ದೇವಿಯನುನಾವಿರಿಸಿಬಂದೆವೊ ।
ಭೂವರನಮೇಲಾಣೆತಪ್ಪದೆ ಹೇಳುತನಗೆಂದ ॥ ॥೭॥

ರಾಮ— ಘನಮದೋದ್ಭಟ ಧಾರೆಯಿಲ್ಲದೆ ।
ವನಮದದ್ವಿಪವುಂಟೆ ತೀಕ್ಷ್ಣ ।
ವಿನುತ ದೀಧಿತಿ ಯಿಲ್ಲದಿನನುಂಟೇ ಜಗತ್ತಿನಲಿ ॥
ವನಜವಿಲ್ಲದ ಕೊಳನುಪರವಾ ।
ಹಿನಿಗಳಿಲ್ಲದ ವಾರ್ಧಿಸೀತಾ ।
ವನಿತೆಯಿಲ್ಲದ ರಾಮನುಂಟೇ ಭೂಮಿಯೊಳಗೆಂದ ॥ ॥೮॥

ರಾಮ— ಕಂಡುಹಂಸೆಯ ಹಂಸಗಮನೆಯ ।
ಕಂಡುದುಂಟೇ ಯೆಂದುಕೋಗಿಲೆ ।
ಗಂಡುಕೋಕಿಲ ಲಲಿತನಿನದೆಯ ಕಾಣಿರೆಲೆಯೆಂದ ॥
ಮಂಡಲಿಯ ಮಧುರಧ್ವನಿಯಗಿಳಿ ।
ವಿಂಡಿನಲಿಕಳಕೀರ ವಚನದ ।
ಹೆಂಡತಿಯ ನೀವ್ ಕಾಣಿರೆಲೆಯೆಂದರಸಬೆಸಗೊಂಡ ॥ ॥೯॥

ರಾಮ— ಎಲೆಹರಿಣ ಹರಿಣಾಕ್ಷಿಯನುಕರಿ ।
ಕಳಭವೇಕರಿಕುಂಭ ಕುಚಮಂ ।
ಡಲೆಯನಾಹರ್ಯಕ್ಷ ಒಡನಡುವಿನ ನಿತಂಬಿನಿಯ ॥
ಒಲುಮೆಕಾತಿರ ನಾತಿಶಯನಿ ।
ರ್ಮಳಿಯ ಸಂಭೋಗಪ್ರವೀಣಾ ।
ಕಲಿತಕೌತೂಹಲೆಯಕಂಡಿರೆ ತೋರುನನಗೆಂದ ॥ ॥೧೦॥

ರಾಮ— ಎಲೆಲೆಮಾಲತಿ ಜಾತಿಕೇತಕಿ ।
ಗಳಿರ ನೀವಾಮೋದಬಾರಾ ।
ಕಲಿತ ಲಲಿತಸ್ಮಿತಲತಾಂಗಿಯ ತುಂಗಕುಚಭರೆಯ ॥
ಸುಳಿವಕಾಣಿರೆ ನೀವ್ ಸುಧಾರಸ ।
ಕಲಿತಬಿಂಬಾಧರೆಯವೇಣೀ ।
ವಿಲಸಿತೆಯ ವಿಲುಲಿತ ಕಟಾಕ್ಷೆಯ ಕಾಣಿರೆಲೆಯೆಂದ ॥ ॥೧೧॥

ರಾಮ— ಸೀತೆ ಸೀತೆ ಸಮುದ್ರವಸನಾ ।
ಜಾತೆಜಾನಕಿ ಜನಕನೃಪಸಂ ।
ಭೂತೆ ವೋವೋಯೆನಲು ಬಾರದೆ ಕರುಣವಿಲ್ಲದಲೆ॥
ಯಾತಕಕಟಾ ತನ್ನನೀಪರಿ ।
ಧಾತುಗೆಡಿಸುವದುಚಿತವೆ ಸಂ ।
ಪ್ರೀತಿವಚನದ ರಚನೆ ನಮ್ಮೊಳಗಿಲ್ಲಲಾ ಯೆಂದ ॥ ॥೧೨॥

ರಾಮ:— ಸೀತೆ ಸೀತೆ ಸರೋಹುನಾನನೆ ।
ಸೀತೆ ಸೀತೆ ಸರೋಜಲೋಚನೆ ।
ಸೀತೆ ಸೀತೆ ಸರೋಜಪರಿಮಳೆ ಯೆಂಬ ನಾಲಿಗೆಯ ॥
ಮಾತು ಮುಗಿಯದೆ ಮನದ ಮನುಕುಲ ।
ಜಾತನಿರೆ ಮೈದೋರಿದುದು ಪುರು ।
ಹೂತದಿಗ್ಭಾಗದಲಿ ಮಂಡಲವಾಹಿಮಾಂಶುವಿನ ॥ ॥೧೩॥

ರಾಮ:— ತರಣಿಯಲ್ಲಿಲೆ ಜೀಯಶಶಿಯುವ ।
ತರಣವೈಸೆ ನೆನಸುನಗುತ ಹಿಮ ।
ಕಿರಣಗುಂಟೇ ಚಟುಲತರ ಚಂಡಾಂಶುವೆಂದೆನಲು ॥
ತರಣಿಕುಲಚಿತ್ರೈಸುನುಡಿಗಪ ।
ಸರಣಿಯುಂಟೇ ತನಗೆನಲು ಹಿಮ ।
ಕಿರಣನಾದಡೆ ಕುರುಹದೇನಂದರಸ ಬೆಸಗೊಂಡ ॥ ॥೧೪॥

ಈ ಪ್ರಕಾರ ರಾಮನ ಆಳಾಪವಂ ಕೇಳಿ ಲಕ್ಷ್ಮಣನು ಮನದಲ್ಲಿ ಧೈರ್ಯತಾಳಿ "ಅಂಣಾ, ನಾನು ಬೆಳಗಾದ ಕೂಡಲೆ ಸೀತೆಯ ವರ್ತಮಾನ ತರುವೆನು—ಆಕೆಯಂ ವೈದವನನ್ನು ಮಣ್ಣು ಮುಕ್ಕಿಸುವೆನು. ಇಗೋ ಈ ಖಡ್ಗವಿದೆ—ನನ್ನಲ್ಲಿ ಶೌರ್ಯವಿದೆ" ಎಂದು ಆಡಿ ರಾಮನಿಗೆ ಸಮಾಧಾನ ಮಾಡುವನು.

ಲಕ್ಷ್ಮಣ— ಇದುಕಣಾ ಜಾನಕಿಯನೊಯ್ದುವ ।
ನೆದೆಯ ಶೂಲವಿದೀಗ ಸೀತಾ ।
ಸುದತಿಯನು ಕದ್ದೊಯ್ದುವನ ಗಳಮುಂಡಲಾಗ್ರಕಣ ॥
ಇದುವಿದೇಹನೃಪಾಲ ತನುಜೆಯ ।
ನಿದಿರುಗೊಂಡರಿಭಟನನೆತ್ತಿಯ।
ನೊದವಕುಂತದುರಂತವಿದೆಯೆಂದಾರ್ದುಬೊಬ್ಬಿರಿದ ॥೧೫॥



## ೫ನೆಯ ಪಾಠ

## ಹನುಮನಿಂದ ಸೀತೆಯ ಶೋಧ ಅವಳಸಂಕಟ ಪರಿಹಾರದಾಶ್ವಾಸನ. ವಿಭೀಷಣನ ಲಂಕಾ ತ್ಯಾಗ.

[ರಾವಣನು ಸೀತೆಯನ್ನೊಯ್ದು ಅಶೋಕವನದಲ್ಲಿಟ್ಟನು. ಅವಳ ಉಪಚಾರಕ್ಕಾಗಿ ತನ್ನ ಕಡೆಯಿಂದ ಸರಮೆ ಎಂಬ ಸ್ತ್ರೀಯನ್ನು ಕಳಿಸಿದ್ದನು. ಅವಳು ಸೀತೆಯ ಮನಸ್ಸು ರಾವಣನ ಕಡೆಗೆ ತಿರುಗುವದಕ್ಕಾಗಿ ರಾವಣನ ಮಹತ್ವವನ್ನು ಕುರಿತು ಸೀತೆಯ ಮುಂದೆ ಬೆಳಿಸಿ ಮಾತಾಡುವಳು. ಸೀತೆಯು ಅವಳಮಾತಿನಕಡೆಗೆ ಲಕ್ಷ್ಯಕೊಡದಲೆ ತನ್ನ ಪತಿನಾಮ ಸ್ಮರಣೆಯಲ್ಲಿರುವಳು. ಇದರಿಂದ ರಮೆಯಲ್ಲಿ ಸೀತೆಯ ಬಗ್ಗೆ ಒಂದು ಪ್ರಕಾರದ ಪೂಜ್ಯಭಾವವುಂಟಾಗಿ ರಾವಣನಿಗೆ ಸೀತೆಯ ಮಹತ್ವವನ್ನು ಕುರಿತು ಹೇಳುವಳು. ಆದರೂ ರಾವಣನು ತಾನೇ ಸೀತೆಯನ್ನು ಮಾತಾಡಿಸುವನು. ಆಗ ಸೀತೆಯಾಡಿದ ನುಡಿಗಳು ಕೆಳಗಿನ ಶ್ಲೋಕಗಳಿಂದ ವ್ಯಕ್ತವಾಗುತ್ತವೆ.]

ಸರಮೆ— ಮೂರುಲೋಕದ ಗಂಡನೀತನ ।
ವಾರಬಹುದೇ ದೇವಿದಿವಿಜರ ।
ನೀರೆಯರುಬಯಸುವರು ಬಹುವಿಧಸುವ್ರತಂಗಳಲಿ ॥
ನೂರು ಜನ್ಮವತಿರುಗಿ ಬಾ ।
ಯಾರಿಕಾಮಿಸಲೀತನಂದದ ।
ವೀರನುಂಟೇ ನಳಿನಭವನಿರ್ಮಿಸಿದಸೃಷ್ಟಿಯಲಿ ॥ ॥೧॥

ಸರಮೆ— ಇವೆಚತುರ್ದಶಭುವನ ದೊಡೆತನ ।
ವಿದೆಸಕಲಸಾಮ್ರಾಜ್ಯ ಸಂಪದ ।
ವಿದೆವಿಭುತ್ವ ಸಮಸ್ತ ಸುರನರಯಕ್ಷಗುಹ್ಯಕರ ॥
ಇದನು ನೀನನುಭವಿಸಲೊಲ್ಲದೆ ।
ಚಮರಿಗೆಡುವರೆ ನೀನೆ ಹೇಳೆಂ ।
ದುದಕೆ ಮಾರುತ್ತರವ ಕಾಣದೆ ಕೆಲಕೆಸಾರಿದಳು ॥ ॥೨॥

ರಾವಣ— ಏನನೆಂದಳು ಸೀತೆ ಮನದೊಳ ।
ಗೇನ ಹಂಬಲಿಸುವಳು ನಿನ್ನನು ।
ಮಾನವೇನಂತಸ್ಥವಾವುದು ಜನಕನಂದನೆಯ ॥

ಮಾನವೇಂದ್ರನ ಮರದಳೀಹದ ।
ನೇನೆನಲು ಹತ್ತಿರಕೆಬಂದುದ ।
ಶಾನನಕರ್ಣದಲಿ ಮೆಲ್ಲನೆ ನುಡಿದಳಾಸರಮೆ॥ ॥೩॥

ಸರಮೆ— ಆಡಲೇನದ ಜೀಯಲೋಕದ ।
ಜೋಡಿಕೆಯು ಜಾನಕಿ ಜಗತ್ತಿನ ।
ಗಾಢಪತಿಭಕ್ತಿಯರಿಗೀಸತಿ ಮಾತೃಭವನವಲ ॥
ಆಡಿದರೆ ಜಗವೇನನೆಂಬುದೊ ।
ಖೋಡಿಗಳು ಕೆಲರುಂಟು ಮಿಕ್ಕಿನ ।
ಹಾಡಿಹೊಗಳಿಸಿಕೊಂಬ ಜಗದಪತಿವ್ರತಾಜನಕೆ ॥ ॥೪॥

ಸರಮೆ— ಕಂಡುಬಲ್ಲೆವು ಕೆಲಬರಸು ಭೂ ।
ಮಂಡಲದೊಳೀಸತಿಯ ಹೋಲುವ ।
ಹೆಂಡರಿಲ್ಲಾ ಧೃವವಶಿಷ್ಕ ಮಹಾಮುನೀಶ್ವರರ ॥
ಹೆಂಡಿರಗಳೊಂದೋಜೆಜಗದಲ।
ಖಂಡಸುವ್ರತೆ ಸೀತೆ ಹುಸಿದಡೆ ।
ಖಂಡಪರಶುವಿನಾಣೆ ಸತ್ಯ ವಿದೆಂದಳಾ ಸರಮೆ ॥ ॥೫॥

ಸರಮೆ— ಆಗುಳಕೆಯಲಿ ಸೀನಿನಲಿನಡ ।
ವಾಗನುಡಿವಾಗಲಸಿಕೆಗಳಲಿ ।
ತಾಗುಗಳೆಡಹುಗಳ ಲೆಚ್ಚರಿಕೆಯಲಿ ಮರವೆಯಲಿ ॥
ಜಾಗದರಲಿಸುಷುಪ್ತಿಯಲಿ ಸಂ ।
ರಾಗದಲಿ ಚಿಂತೆಯಲಿ ರಘುಕುಲ ।
ಸಾಗರನ ನೆನಹಲ್ಲದಿಲ್ಲನ್ಯತ್ರಗತಿ ಸತಿಗೆ ॥ ॥೬॥

**ಈರೀತಿಯಲ್ಲಿ ಸರಮೆಯು ತಿಳಿಸಲು ರಾವಣನು ತಾನು ಬೆದರಿಸಿ ನೋಡಬೇಕೆಂದು—**

ರಾವಣ— ಮರುಳಲಾ ಎಲೆ ಸೀತೆ ನಿನ್ನನು ।
ತಿರುಗಿ ತಗೆವವಗೆಂಟುಕಂಗಳು ।
ಶಿರದೊಳರಲಿನ್ನೀವು ದದುಹುಸಿಹಲವುಮಾತೆನು ॥
ಹರಿಹರ ಬ್ರಹ್ಮಾದಿ ದೇವರ ।
ಸರಕು ಮಾಡುವೆ ಮಾಡೆನೆಂಬುದು ।
ಧರೆಯೊಳಗೆ ನೀಕೇಳಿಕೋ ಕಾಳಾಗ ಬೇಡೆಂದ ॥ ॥೭॥

ರಾವಣ— ಸುರಪಶಿಖಿವರುಣಾದಿಗಳು ಕಿಂ ।
ಕರರುತನಗಿಂದಬುಜಭವಶಂ ।
ಕರರುತನ್ನಾಶ್ರಿತರು ನಳಕೂಬರಜಯಂತಕರು ॥
ಚರಣಸೇವಕರಮರಮು ।
ನಿತುಂಬುರರು ಗಾಯಕರಿಂದುಮನ್ಮಥ ।
ವರದಸಂತಕರೊಲಿವಸತಿಯರ ದೂತರಿವರೆಂದ ॥ ॥೮॥

ರಾವಣ— ಸುರರು ಗುರು ನಾವಂತ್ಸರಿಕೆ ಸುರ ।
ತರುಣಿಯರು ತೊತ್ತಿರುಸುರೋರುಗ ।
ನರನಿಶಾಚರ ಭುವನದೊಡೆತನವೆನ್ನದೆನಗಿಂತು ॥
ಸರಿಯದಾರೆಲೆ ಸೀತೆ ನೀನೀ ।
ಸಿರಿಯನನುಭವಿಸದೆ ನಿರರ್ಥಕೆ ।
ಜರದುಮನುಜ ಧ್ಯಾನಿಸುವುದಿದು ಯೋಗ್ಯವಲ್ಲೆಂದ ॥ ॥೯॥

ಸೀತೆ— ಕಣ್ಗಳಲಿ ಕಿಡಿಸೂಸೆ ಕೈಯಲಿ ।
ತೃಣವನುರೆಮುರಿದಿಕ್ಕಿ ನುಡಿದಳು ।
ಬಣಗುರಕ್ಕಸ ಕೇಳೆಲವೊನಿನಗಿನಿತುಗುಣವಿರಲು ॥
ತ್ರಿಣಯನನದು ವಂದದೇತಕೆ ।
ಮಣಿಯದಾದುದು ಸುಡುಸುಡೆಲವೋ ।
ಹೆಣದಿನಿಹಿಗಳಿಗುಚಿತವೀಮಾತೆಂದಳಾ ಸೀತೆ ॥ ॥೧೦॥

ರಾವಣ— ಯಾಕೆ ನಿನಗೀ ಮರುಳುತನ ವಿ ।
ವೇಕನೀನಾರಾನರಾಧಮ ।
ಕಾಕನಾರುಪಜೀವನ ಪ್ರಾರಬ್ಧಫಲಗಳಲಿ ॥
ಸೋಕಿದುದನನುಭವಿಸುವುದೆಸು ।
ವ್ಯಾಕುಲದ ಸುಪ್ರೌಢೆ ನಿನಗಿ ।
ನ್ಯಾಕೆ ರಾಮನಚಿಂತೆಯೆನಲುರಿಮಸಗಿತವನಿಜೆಗೆ ॥ ॥೧೧॥

ಸೀತೆ— ತಂದರತಿಬಲನಹುದಲೇರಘು ।
ನಂದನನ ಸಮುಖದಲಿಮ್ಮನು ।
ಹಂದೆಹೋಗೆಲಿನಾಯಿ ನಿನಗೇಕಮರಮಾನವರ ॥
ದಂದ ಶೂಕರಭುವನದೊಡೆತನ ।
ಬೆಂದಮೋರೆಗೆ ಬಹುವಿಕಾರದ ।
ಮಂದಿವಾಳದ ಮಾತದೇಕೆಂದುರುಬಿದಳುಖಳನ ॥ ॥೧೨॥

ಸೀತೆ— ತನಗೆಗಡಸುರರನು ಭಂಟಸು ।
ವನಜ ಭವಭವರಾತ್ರಿತರುಗಡ ।
ಮನೆಯತೊತ್ತಿರು ಗಡಸುರಾಂಗನೆಯರು ವಿಚಿತ್ರವಲ ॥
ಮನಸಿಜಾದ್ಯರು ಸೇವಕರುಗಡ ।
ಮನುಜಗಡ ರಘುನಾಥನಿವನಾ ।
ನನವ ಶೀಳುವರಿಲ್ಲವಕಟಕಟೆಂದಳಿಂದುಮುಖಿ ॥ ॥೧೩॥

ಸೀತೆ— ಸಲವುದೀ ನುಡಿಪಾಪಿಗಳಿಗ ।
ಸ್ಖಳಿತಮೂರ್ಖಾಧಮರಿಗೆ ದುರ್ಬೋಧ ।
ರಳಿದವರಿಗಭಿಮಾನಹೀನರಿಗಿದುವೆ ಸಿದ್ಧವಲಾ ॥
ಎಲವೊ ನಿನ್ನೊಳುಮಾತನಿದಿರೊಳು ।
ಗಳಹಲಹುದೇಸುವ್ರತೆಯರೆಲೆ ।
ಹೊಲೆಯಹೋಗೆಂದಬಲೆಮುಖದಿರುಹಿದಳು ಖಾತಿಯಲಿ ॥೧೪॥

ರಾವಣ ಶಿಟ್ಟಾಗಿ— ಫಲಪತಿವ್ರತೆ ತಾನುಗಡಕಾ ।
ಳ್ಗಡದು ನುಡಿವರು ನಾವುಗಡಧಿಟ ।
ಕಡಿದರೆಯ ತಾಮೆಟ್ಟಿಮಿಾವಳು ಗಡಮಹಾದೇವ ॥
ಒಡತಿಗಡ ಬಲುಸಂಪದಕೆಬಾಯ ।
ಬಡಿಕಹೆಂಗುಸ ಕೊಲುವೆನೆಂದು ।
ಗ್ಗಡವ ಕೋಪದಲೆತ್ತಿದನು ಖಂಡೆಯವನಸುರೇಂದ್ರ ॥ ॥೧೫॥

ಹೀಗೆಸಿಟ್ಟಿಗೆದ್ದ ರಾವಣನು ಸೀತೆಯನ್ನು ಖಡ್ಗದಿಂದ ಹೊಡೆದು ಕೊಲ್ಲಬೇಕೆಂದು ಕೈಯೊಳಗಿನ ಕತ್ತಿಯನ್ನೆತ್ತುವಷ್ಟರಲ್ಲಿ, ಸುದೈವದಿಂದ ರಾವಣನ ಹೆಂಡತಿಯಾದ ಸಾಧ್ವೀ ಶಿರೋಮಣಿಯಾದ ಮಂಡೋದರಿಯು ಬಂದು, ಅವನ ಕೈಯ್ಯೊಳಗಿನ ಕತ್ತಿಯನ್ನು ತಡೆದು, ರಾವಣನಿಗೆ ಸೀತೆಯ ಘನತೆಯನ್ನು ಹೇಳಿ ತನ್ನ ಗಂಡನನ್ನು ಮನೆಗೆ ಕರೆದೊಯ್ಯುವಳು.

ಮಂಡೋದರಿ— ಅಹಹರಕ್ಕಸರಾಯ ಮರುಳೇ ।
ವಿಹಿತವೇ ನಿನಗಿದು ಜಯಶ್ರೀ ।
ಮಹಿಳೆ ನಗದಿಹಳೆ ಯಶೋರಮೆ ನಾಚಿತಲೆಗೊಡಹಿ ॥
ಬಹಿಕರಿಸದಿಹಳೇ ಧರಾಂಗನೆ ।
ಗಹಗಹಿಸದಿಹಳೇ ವಿಚಾರವ ।
ವಹಿಸದಳಿವರೆ ಸತಿಯನೆಂದಳು ಮಯನಸುತೆಪತಿಯ ॥೧೬॥

ಜಡಿದುಚಿಮ್ಮುವ ಖಂಡೆಯಕೆ ಕೈ ।
ದುಡುಕಿ ಮಂಡೋದರಿ ನಿಜೇಶನ ।
ಕೆಡುಹಕಳಲಿಸಿಕೆಲಕೆ ಸಾರಿಸುವನಿತರೊಳು ಹನುಮ ॥
ಕಿಡಿಗೆದರಿಗಿಣಿವಿಂಡಿಗೆರಗುವ ।
ಗಿಡಗನವೊಲುಬ್ಬೆದ್ದುತೊಲಗಿದ ।
ಖಡುಗವನು ಕಂಡಂತರಿಸಿವನು ಮರದಕೊಂಬಿನಲಿ ॥ ॥೧೭॥

ಮರುಳತನ ಬೇಡೇಳು ನಡೆನರ ।
ತರುಣಿಯೇ ತಾನೀಕೆ ಸಾಕ್ಷಾ ।
ತ್ಪರಮ ಪುರುಷನ ಪುಣ್ಯವಧುವೆಂಬಂತೆ ತೋರುತಿದೆ ॥
ಸ್ಮರವಿಕಾರದ ಬುದ್ಧಿಸಾಕಾ ।
ನೆರದುಗೆಡಬೇಡೆಂದು ಮಂಡೋ ।
ದರಿ ನಿಜೇಶನ ನೊಯ್ದಳರಮನೆ ಗಣುಗಕೇಳೆಂದ ॥ ॥೧೮॥

[ತಮ್ಮನಾದ ವಿಭೀಷಣನು ಅಂಣನಾದ ರಾವಣನಿಗೆ ಸೀತೆಯು ಸಲುವಾಗಿ ರಾಮನು ಸುಗ್ರೀವಾದಿ ಕಪಿಸೈನ್ಯದೊಂದಿಗೆ ಯುದ್ಧಮಾಡಲು ಬರುವುದನ್ನು ತಿಳಿದು ಸೀತೆಯಂಬಿಟ್ಟು ಕೊಡಲಿಕ್ಕೆ ಅನೇಕ ಬಗೆಯಿಂದ ಬೇಡಿಕೊಳ್ಳುವನು.]

ವಿಭೀಷಣ– ಅಂಣ ಕೇಳೀ ತಗಳವಾತಿನ ।
ಬಂಣಿಗೆಗಳಂತಿರಲಿ ಭೂಮಿಯ ।
ತಿಣ್ಣವನು ತಿದ್ದಲಿಕೆ ಹರಿನರನಾಗಿರೂಹಿಸಿದ ॥
ಹೆಂಣನೆವದಲಿ ನಮ್ಮನೆಲ್ಲರ ।
ಮಂಣುಗೂಡಲಿ ಬಂದನಾವಿಂ ।
ನುಂಣದುರಿಯಲು ಬೇಡಸೀತೆಯ ಬಿಟ್ಟು ಬದುಕೆಂದ ॥ ॥೧೯॥

ಯಾಕೆನಿನಗೀಭ್ರಮೆ ವಿದೇಹಜೆ ।
ಸೋಕುವವಳಲ್ಲರಸ ನೀನದಿ ।
ವೇಕೆಯಾಗದಿರೀ ಮಹೋನ್ಮತ್ತರುಗಳುಬ್ಬಿದರೆ ॥
ಆಕಕುಸ್ಥಜ ಮನುಜನಲ್ಲವ ।
ನಾಕಪರು ಮೃಗವಲ್ಲ ತಾನಿದು ।
ಲೋಕಕಂಟಕರಳಿವಿಗೊಡ್ಡಿದ ಜೀನುವಲೆಯೆಂದ ॥ ॥೨೦॥

ಕುಲದಲಲ್ಪನೆ ನೀನು ಮುನಿಕುಲ ।
ತಿಲಕಪೌಲಸ್ತ್ಯ ಜನಲಾನಡ ।
ವಳಿಯೊಳಧಮನೆ ನೀನು ಶಿವಪೂಜಾಪ್ರಸಿದ್ಧನಲಾ ॥
ತಿಳುಹಿನಲಿ ಬರಡನೆಬಹುಶೃತಿ ।
ಗಳು ಮುಖೋದ್ಗತವಕಟನಿನಗೇ ।
ತಿಳಿಯೆಜಾರರಜೋಲಿ ಬಿಡುಜಾನಕಿಯ ನೀನೆಂದ ॥ ॥೨೧॥

ಜಾರೆಯೇ ಜಾನಕಿ ಜಗತ್ರಯ ।
ವೀರಪಾತಿವೃತೆಯಲಾನರ ।
ಹಾರಿಯೆ ವೈದೇಹಿ ನಾರಾಯನ ಪತ್ನಿಯಲಾ ॥
ಶ್ರೀರಮಣಿ ಚಂಚಲೆಕಣಾ ಕ್ಕೆ ।
ಸೇರಿದಳು ನಿಮಗೆಂಬ ಮನದವಿ ।
ಕಾರವೇಕೆಲೆಯಂಣ ಬಿಡುಜಾನಕಿಯ ನೀನೆಂದ ॥ ॥೨೨॥

ರಾವಣ— ಏನೆಲವೊನೀನಿತು ಹೊಗಳುವ ।
ಡೇನಹನು ನಿನಗಾನರೇಂದ್ರನು ।
ಸೂನುವೊ ಮೊಮ್ಮಗನೊ ಮರಿಮಗನೊ ನಿಧಾನಿಸಲು ॥
ಆನಿಹಿಂದಣ ಹಿಂದೆಗರಿಗಾ ।
ದಾನುಡಿಯ ನುಡಿದೆನ್ನನಂಜಿಸಿ ।
ಜಾನಕಿಯ ನೀಬಿಡಿಸುವವನೇ ಭ್ರಷ್ಟಹೋಗೆಂದ ॥ ॥೨೩॥

ವಿಭೀಷಣ- ಆದಡೆಲೆಖಳರಾಯ ಕೇಳ್ ಖರ ।
ಸೂದನನ ಸೂರ್ಯಾನ್ವಯನಸಂ ।
ಪಾದಕದಶರಪರಶುನಿನ್ನಯ ಕೊರಳುಹಳುವದಲಿ ॥
ಬೀದಿವರಿವುದು ಪುತ್ರಮಿತ್ರ ಸ ।
ಹೋದರರು ಸಾವರು ನೃಪಾಲತ ।
ಳೋದರಿಯ ನೀನೀಯದಿರೆ ನಿಶ್ಚಯವಿದೀಗೆಂದ ॥ ॥೨೪॥

ರಾವಣ— ಬೀಳಲಾನುಡಿ ಕರ್ಣದಲಿ ಲಯ ।
ಭಾಳನೇತ್ರನ ಭೀಮ ರೌದ್ರಕ ।
ರಾಳಕಿಮ್ಮಿಗಿಲೆನಲು ಸುರಿದವು ಕಂಗಳಲಿಕಿಡಿಯ ॥
ಬೀಳ ಹ್ಯೊಹ್ಯೊ ಬಾಯ ಬೊಗಳುವ ।
ನಾಲಿಗೆಯ ಕೊಯ್ಯಾಲಹಿಡಿದೆಳೆ ।
ಕಾಳಮೂಳನೆನುತ್ತ ಝಡಿದನು ಚಂದ್ರಹಾಸಕವ ॥ ॥೨೫॥

ವಿಭೀಷಣನು ಮೇಲಿನಂತೆ ರಾವಣನಿಗೆ ಸದ್ಬೋಧೆ ಮಾಡಿದಾಗ್ಗೂ ಅದು ಮರುಭೂಮಿಯಲ್ಲಿ ಸಸಿಯುನಾಟದಂತೆ ರಾವಣನ ಕಲ್ಮಷ ಹೃದಯದಲ್ಲಿಳಿಯಲಿಲ್ಲ. ಆದ್ದರಿಂದ ವಿಭೀಷಣನು ತಾನು ತಾಯಿಗೆ ನಮಸ್ಕರಿಸಿ ಲಂಕೆಯಂಬಿಟ್ಟು ತೆರಳುವಾಗ, ಸಭೆಯಲ್ಲಿದ್ದ ಅಂಣನಿಗೆಕೂಗಿ ಮಾರಿಯ ಕರವು ಕೊಂಬುದು ಕಣೆಯಲ್ಲವೆಂದು ಹೇಳಹೋಗಲು, ದ್ವಾರಪಾಲಕರು ರಾವಣನ ಆಜ್ಞೆಯಿಂದ ಅವನನ್ನು ಒಳಗೆ ಬಿಡದ್ದರಿಂದ, ಆತನ ಹಣೆಯಲ್ಲಿ ಬರೆದದ್ದನ್ನುಣ್ಣಲೆಂದು ವಿಭೀಷಣನು ರಾಮನೆಡೆದುಬಂದು ಆತನಿಗೆ ಶರಣಾಗತನಾದನು ಅಷ್ಟರಲ್ಲಿ ಹನುಮಂತನು ಅಶೋಕವನದಲ್ಲಿ ಸೀತೆಯಂಕಂಡು ರಾಮನ ವಾರ್ತೆಯಂತಿಳಿಸಿ ಅವಳ ಭಯನಿವಾರಣೆ ಮಾಡಿ ಬರುವನು.



## ೭ನೆಯ ಪಾಠ

# ವಿಭೀಷಣನ ನೀತಿಬದ್ಧ ನಡತೆ—ಆತನಿಗೆ ರಾಮನ ನಿಸ್ವಾರ್ಥ ವಚನ—

[ದುಷ್ಟನಾದ ರಾವಣನನೊಡನಿದ್ದರೆ ತನಗೆ ಹಾನಿ ತಪ್ಪದೆಂದು ವಿಭೀಷಣನು ರಾಮನಿದ್ದೆಡೆಗೆಬಂದು ತನ್ನನ್ನು ರಕ್ಷಿಸಬೇಕೆಂದು ಬೇಡಿಕೊಳ್ಳುವನು. ಮೊದಮೊದಲು ರಾಮನಿಗೆ ಈ ವಿಭೀಷಣನ ವಿಷಯದಲ್ಲಿ ಸಂಶಯ

ಬರುವದು. ಅದನ್ನು ಹನುಮಂತನು ಅವನನೀತಿವರ್ತನವನ್ನು ಕಂಡವನಾದ್ದರಿಂದ ಅವನನ್ನು ಅಂಗೀಕರಿಸಬೇಕೆಂದು ರಾಮನಿಗೆ ಬೇಡಿಕೊಳ್ಳುವನು. ಬಳಿಕ ರಾಮನು ವಿಭೀಷಣನನ್ನು ಸತ್ಕರಸಿ ತನ್ನ ಬಳಿಯಲ್ಲಿರಿಸಿಕೊಂಡು ಅವನಿಗೆ ದಶಕಂಠನನ್ನು ಗೆದ್ದ ಲಂಕಾಧಿಪತ್ಯವನು ಕೊಡುವಬಗ್ಗೆ ಅಭಿವಚನವನ್ನೀಯುವನು.]

ವಿಭೀಷಣನು- ಶರಣುಜನ ಸುರಧೇನುಸುಧೆಯಾ ।
ಕರಸದಾರ್ತಜ ನೌಘರಕ್ಷಾ ।
ಕರ ಕೃಪಾಕರ ದೇವದೀನಾನತಜನೋದ್ಧರಣ ॥
ಶರಣು ಸರ್ವೇಶ್ವರ ಸನಾಥನೆ ।
ಶರಣುಸದ್ಗುಣ ಧಾರ್ಮಿಕಶೃತಿ ।
ಶರಣುರಘುಪತಿ ಶರಣುಶರಣೆನುತಿರ್ದನಸುರೇಂದ್ರ ॥ ॥೧॥

ಹನುಮಂತ- ಬರವಿದೇನಿದ್ದುದು ದಶಕಂ ।
ಧರನನುಜ್ಞೆಯೊ ಮೇಣ್ವಿವೇಕ ।
ಸ್ಫುರಿತಗುದಿತ ಭವಿಷ್ಯದನುಪಮಗತಿಯ ಗಾಢಿಕೆಯೊ ॥
ಎರಡರೊಳಗೇನೆಂದು ಬೆಸಗೊಳೆ ।
ವಿರಚಿಸಿದನು ಭಯಾನುಮತವಿ ।
ವಿಸ್ತರಣವನು ಬಳಿಕಾ ವಿಭೀಷನನಿಲತನಯಂಗೆ ॥ ॥೨॥

ಹನುಮಂತ– ಜೀಯ ಬಂದವನೀಗರಕ್ಕಸ ।
ರಾಯನನುಜನುನೀತಿ ವಿದನಸ ।
ಹಾಯುಶೂರನುದಾರ ಗಭೀರ ಧಾರ್ಮಿಕನು ॥
ಮಾಯೆ ಹೊಗದೀತನಲಿ ಹಿಂದೆಸ ।
ಹಾಯ ವಚನದೊಳೆನ್ನ ಬಂಧನ ।
ದಾಯತವ ಬಿಡಿಸಿದನು ತಪ್ಪಿಲ್ಲಸುರನೊಳಗೆಂದ ॥೩॥

ಹನುಮಂತ— ಮನಮುನಿಸು ಬಳಿಕಾಯ್ತು ಗಡಖಳ ।
ಜನಪ ನೋಡನೀತಂಗೆ ದೇವರ ।
ವನಿತೆಯನು ಬಿಡಹೇಳಿದರೆ ಬಿಡದೀ ವಿಭೀಷಣನ ॥
ಅನುಜನೆಂದೋವದೆ ವಿರೋಧಿಸಿ ।
ಕನಲಿನೂಕಿಸಿದ ಗಡತ್ವತ್ಪದ ।
ವನರುಹವ ನೋಲ್ಪೆನಲೆಂದೈತಂದ ತಾನುಗಡ ॥೪॥

ರಾಮ— ಧುರದೊಳಿದಿರಾದವರ ನಿರಿವುದು ।
ಶರಣುಹೊಕ್ಕರ ಸಲಹುವುದು ಪತಿ ।
ಕರಿಸುವುದು ಧರ್ಮವನ ಧರ್ಮವಳಿವುದವನಿಯಲಿ ॥
ಅರಸುಗಳಿಗಿದು ನಯವಿನಿತು ಗೋ ।
ಚರಿಸದಿರೆ ಹಗರಣದ ನಾಟಕ ।
ವರಸುತನವೀಜಗದೊಳೆಂದನು ನಗುತ ರಘುನಾಥ ॥೫॥

,, ಇನತನೂಭವಕೇಳು ತನ್ನಯ ।
ತನುವನಿತ್ತಾದಡೆಯುಮರೆಹೊ ।
ಕ್ಕವರ ಮನ್ನಿಸುವುದೆ ಮಹಾಕ್ಷತ್ರಿ ಯರಪಂಥಕಣ ॥
ನಿನಗೆ ಹೇಳುವದೇನು ನೀನ ।
ಜ್ಞನೆ ವಿಚಾರಿಸಿ ಕೇಳದರಿಯಾ ।
ವಿನುತ ವಿಮಲ ಕಪೋತ ಚರಿತವನೆಂದನಾರಾಮ ॥೬॥

ವಿಭೀಷಣ— ರಕ್ಷಿಸೆನ್ನನನಾಥ ಬಂಧುವೆ ।
ರಕ್ಷಿಸೈ ಕಾರುಣ್ಯ ಸಿಂಧುವೆ ।
ರಕ್ಷಿಸೈ ರಾಕ್ಷಸ ವಿದೂಷಣನನ ವಿಭೀಷಣನ ॥
ಅಕ್ಷಯನೆ ಅಭವನೆ ಜಗತ್ರಯ ।
ರಕ್ಷಕನೆ ತಾರಕಪರಾಯಣ ।
ಶಿಕ್ಷಕನೆ ಶರಣಾಗತನ ಸಲಹೆಂದನಸುರೇಂದ್ರ ॥ ॥೭॥

೩೨ ರಾಮನು ವಿಭೀಣನಿಗೆ ಕುಶಲ ಪ್ರಶ್ನ ಕೇಳಿದ್ದು

ರಾಮ— ಏಳು ಭಯಬೇಡೆಲೆ ವಿಭೀಷಣ ।
ಕೇಳು ಲಕ್ಷ್ಮಣನಂತೆ ಕಾಂಬೆನ್ನ ।
ಪಾಲದಶರಥನಾಣೆ ಮನದಲಿ ಚಿಂತೆಬೇಡೆಂದು ॥
ಮೌಳಿಯನು ಹಿಡಿದೆತ್ತಿ ಸೀತಾ ।
ಬಾಲಿಕೆಯನಪ್ಪುವ ಸುಕೋಮಲ ।
ತೋಳಿನಲಿ ಬಿಗಿಯಪ್ಪಿದನು ಬಳಿಕಾವಿಭೀಷಣನ ॥೮॥

ರಾಮ— ಕರದು ರಘುಪತಿತನ್ನ ನಿಜವಿ ।
ಷ್ಟರದ ಕೆಲದಲಿ ನಿಲಿಸಿ ವಿಕಸಿತ ।
ವರವಚನಸರಿಸಿಜದಿನೊಯ್ಯನೆ ಕೇಳ್ದನುಚಿತದಲಿ ॥
ಪುರಜನಂಗಳು ಸುಖಿಗಳೇ ದಶ ।
ಶಿರನು ಹದುಳಿಗನೇ ನಿಜಾಗ್ರಜ ।
ವಿರಹವೇನುನಿಮಿತ್ತ ಸಂಭಾವಿಸಿತು ನಿನಗೆಂದ ॥೯॥

,, ಜಗದ ವೀರರೊಳಗ್ಗಳನು ಸಂ ।
ಯುಗಸಮರ್ಥನು ಸುರನರೋರಗ ॥
ಜಗತಿಗೊಡೆಯನು ಸುಪ್ರಸಿದ್ಧನು ಶಿರಿಯಸೊಂಪಿನಲಿ ॥
ನಗಸುತಾವರ ನೊಲುಮೆ ನೆಟ್ಟನೆ ।
ಸೊಗಸಿಹುದು ನಿನ್ನಗ್ರಜಗೆ ನೀ ।
ನಗಲಿಬಹುದಿದುಚಿತ್ರವೆಂದನು ರಾಮ ನಸುನಗುತ ॥೧೦॥

,, ಆವದೇಶದೊಳಾದಡೆಯು ಸತಿ ।
ಮಾವಸುತ ದೌಹಿತ್ರಮಿತ್ರಜ ।
ನಾವಳಿಯಜೋಡಿಸಲು ಬಹುದಗ್ರಜಸಹೋದರರ ॥
ಆವಪರಿಯಲಿ ಗಳಿಸಬಹುದೈ ।
ಭೂವಳಯದಲಿ ನಿನ್ನ ಬರವಿನ ।
ಭಾವವೆಮಗೇನರಿಯಬಾರದು ಯೆಂದನಾರಾಮ ॥ ॥೧೧॥

ವಿಭೀಷಣ— ದೇವಕೇಳ್ ಪರನಾದಡೆಯು ಹಿತ ।
ವಾವುಗುಂಟವ ಬಂಧುಬಾಂಧವ ।
ನಾವನಹಿತನೆ ಪರನು ತಾನಿದು ಶಾಸ್ತ್ರಸಿದ್ಧವಲೆ ॥
ಈವುದೇರುಜೆ ಹಿತವ ತನ್ನಕ ।
ಳೇವರದರುಜೆಯೆಂದಡಡವಿಯವುಷಧ ।
ನೀವವೊಲು ರಾಜೇಂದ್ರ ಚಿತ್ತೈಸೆಂದನಸುರೇಂದ್ರ ॥ ||೧೨||

ದೇವಕೇಳಿನ್ನೊಂದು ಜಗದಲಿ ।
ಜೀವಿಸುವದುಂಟಾದಡಡವಿಯ ।
ಜೀವನವಕೊಂಡಿಹುದು ಮೆಲುವುದು ಗಡ್ಡೆಗೆಣಸುಗಳ ॥
ಸೇವಿಸುವದು ಚಮೂರುಸಿಂಹ ಮೃ
ಗಾವಳಿಯ ನತಿಮೂರ್ಖದುಷ್ಕೃತ ।
ಜೀವಿಗಳ ಬಳಿವಿಡಿದು ಬದುಕುವದುಚಿತವಲ್ಲೆಂದ ॥ ||೧೩||

ಬಾಳಬೇಕೆಂದೆಂಬವಗೆ ಚಾಂ ।
ಡಾಲಗೃಹ ವೀಧಿಯಲಿ ಭಿಕ್ಷದ ।
ಕೂಳತಿರಿತಂದುಂಡು ಬದುಕವದಧಿಕ ಸೌಖ್ಯಕಣ ॥
ಕೇಳಿದೈ ರಾಜೇಂದ್ರ ಮೂರ್ಖರ ।
ಕೇಳನೋಳದಲಿದ್ದು ಬದುಕುವ ।
ಖೂಳವೃತ್ತಿಯ ಬದುಕು ಕಷ್ಟಕೆ ಕಷ್ಟತರವೆಂದ ॥ ||೧೪||

,, ಆದರಿನಘಸಂದಷ್ಟವಂಣಾಂ ।
ಗುದಿಸಲುಳ್ಳಡೆ ಹುದುಗಿ ದುರ್ಗತಿ ।
ಗಿಳಿವುದೊಳ್ಳಿತೊ ಬಿಡುವುದೊಳ್ಳಿತೊ ದೇವಚಿತ್ತೈಸು ॥
ವಿದಿತ ಲೌಕಿಕ ವೈದಿಕವ ವಿೂ ।
ರಿದುದು ನಡವಳಿಯಂಣ ನೆಂಬೀ ।
ಹದನರಿದು ನಿಮ್ಮಂಘ್ರಿಕಮಲವ ಸಾರ್ದೆನಾನೆಂದ ॥ ||೧೫||

ವಿಭೀಷಣನ ಸರಳಹೃದಯದಿಂದ ಹೊರಟ ಉದ್ಗಾರಗಳಿಗೆ ಮನಸೋತು ರಾಮನು ರಾವಣನನ್ನು ಗೆದ್ದು ಲಂಕಾ ರಾಜ್ಯದೊಡೆತನ ವಿಭೀಷಣನಿಗೆ ಕೊಡುವೆನೆಂದು ಭಾಷೆಯನ್ನಿತ್ತನು.

ಈ ಭಾಷೆಯನ್ನು ಕೇಳಿ ಜಾಂಬವಂತ ಮೊದಲಾದವರು ರಾಮನನ್ನು ಕುರಿತು ಕೆಳಗಿನಂತೆ ಪ್ರಶ್ನೆಮಾಡುವರು.

ರಾವಣನ ತಮ್ಮನಿಗೆ ಲಂಕೆಯು ।
ನೋವಿಕೊಟ್ಟರಿ ದೇವ ಬಳಿಕಾ ।
ರಾವಣನು ಜಾನಕಿಯನೊಪ್ಪಿಸಿ ನಿಮ್ಮಪದಯುಗವ ॥
ಭಾವಶುದ್ಧಿಯಲೀಗ ಕಂಡರೆ ।
ನೀವುದಾವುದನೀಪಿರೆಂದಾ ।
ಪಾವಮಾನಜರವಿಜರುರೆ ಬಿನ್ನಹವಮಾಡಿದರು ॥ ॥೧೬॥

ರಾಮ— ಕೇಳು ಜಾಂಬವ ಕೇಳು ಲಕ್ಷ್ಮಣ ।
ಕೇಳು ನಳನೀಲಾದಿಸುಭಟರೆ ।
ಕೇಳಿರೈ ದಶಮುಖನು ಕಂಡರೆ ತಮ್ಮ ಪದಯುಗವ ॥
ಬಾಲೆಯನು ತಂದಿತ್ತನಾದರೆ ।
ಕೋಳುಗೊಡುವೆನಯೋಧ್ಯನಗರವ ।
ನಾಳುವವೊಲಾಕಮಲಜನಕಲ್ಪಾಂತಪರಿಯಂತ ॥ ॥೧೭॥



# ೭ನೆಯ ಪಾಠ

# ಮಾಟದ ಸೀತೆಯ ಕಥೆ

[ರಾಮ ರಾವಣರ ಸಂಗ್ರಾಮದಲ್ಲಿ ಉಭಯ ಪಕ್ಷದ ಅನೇಕವೀರರು ಮಡಿವರು ರಾಮನ ಪಕ್ಷದಲ್ಲಿ ಮಡಿದ ವೀರರಿಗೆ ಸಂಜೀವಿನೀ ಔಷಧ ತರಿಸಿ ಅವರನ್ನು ಪುನಃ ಚೇತನ ಗೊಳಿಸಿ ಯುದ್ಧಕ್ಕೆ ಅಣಿಮಾಡುವರು. ದಶಕಂಠನ ಪಕ್ಷದ ಅನೇಕ ವೀರರು ರಣದಲ್ಲಿ ಶೌರ್ಯದಿಂದಕಾದಿ ಮಡಿದ ಬಳಿಕ ರಾವಣನ ಮಗನಾದ ಇಂದ್ರಜಿತುವು ಯುದ್ಧದಲ್ಲಿ ಅನೇಕ ಕೋಟಿ ಕಪಿಸೈನ್ಯವನ್ನು ತುಂಡರಿಸುವನು. ಕಡೆಗೆ ಒಂದು ಸೀತೆಯ ಮಾಯಾಮೂರ್ತಿಯನ್ನು ಮಾಡಿ ಹನುಮಂತನು ನೋಡುವಂತೆ ಅವಳನ್ನು ತನ್ನ ಖಡ್ಗದಿಂದ ಹೊಡಿಯುತ್ತೇನೆಂದು ಹೇಳಲು, ಹನುಮನು ಆಕೆಯಂಕೊಲ್ಲಬೇಡವೆಂದು ಅಂಗಲಾಚಿ ಬೇಡಿಕೊಂಡರೂ ಕೇಳದೆ ಮಾಯಾಸೀತೆಯಂ ತನ್ನ ಖಡ್ಗದಿಂದ ಕೊಂದುಬಿಡುವನು. ಇದಕ್ಕಾಗಿ ರಾಮನು ಶೋಕ ಮಾಡುವನು. ಆದರೆ ವಿಭೀಷಣನು ಬಂದು ಜೀಯ ಶ್ರೀ ರಾಮಚಂದ್ರನೇ ನೀನು ಸರ್ವಜ್ಞಮೂರ್ತಿಯಿದ್ದು ಈ ಸೀತೆಯು ಕಪಟ ರಚನಾಮೂರ್ತಿಯೆಂಬುದು ನಿನಗೆ ಹೇಗೆ ತಿಳಿಯಲಿಲ್ಲ? ನೋಡು, ಇದು ಮಾಯಾಸೀತೆಯೆಂದು ದನ್ನು ಮುಟ್ಟಲು ಅದು ಬಯಲಾಗುವದು. ಇದೆಲ್ಲ ಕೆಳಗಿನ ಶ್ಲೋಕಗಳಿಂದ ಸ್ಪಷ್ಟವಾಗುವದು.]

## ಮಾಯಾ ಸೀತೆಯ ಆಕ್ರಂದನ

ಆರಿಗೋಸುಗಸಮರವಿದು ತಾ ।
ನಾರಿಗೀಯಭಿಮಾನ ಲಜ್ಜಾ ।
ದಾರುಣವು ನಿಮಗಿನ್ನು ಕೇಳ್ಪೆ ತಂದೆ ಹನುಮಂತ ॥
ಕ್ರೂರಕರ್ಮದ ಖಳರಕೈಯಲಿ ।
ತೀರುವಂತಾಯ್ತು ಕಟಕಟ ಕಂ ।
ಣಾರೆಕಂಡ್ಯೆ ತನ್ನ ಪಾಪವನೆಂದುದಾಮಾಯೆ ॥ ॥೧॥

ಗಂಡಬೇಡೆನೆ ಬಂದೆನತ್ತೆಯ ।
ನಂಡಲೆದೆ ನೀಹೋಗಬೇಡೆನೆ ।
ಕಂಡವರ ಕನಲಿದೆನು ಕಳಹಿದರೆನ್ನ ಪತಿಯೊಡನೆ ॥

ಉಂಡೆನಾಪತ್ತ್ರನು ಸಮಗ್ರ್ರದ ।
ಖಂಡಿತವದೇ ಹನುಮ ಕೇಡನು ।
ಕಂಡೆ ಕಂಡ್ಯೆ ಕಡೆಯ ಕೆಲಸವನೆಂದುದಾವಾಯೆ ॥ ॥೨॥

ಆವರಾಯನ ಬಸುರಿನಲಿ ಬಂ ।
ದಾವರಾಯನ ಮಗನಕ್ಕೈವಿಡಿ ।
ದೀವಿಧಿಯನುಣಲಿದ್ದುದೇ ನೋಡಯ್ಯ ಹನುಮಂತ ॥
ಆವಪೂರ್ವದ ಫಲವೊ ಬಳಿವಿಡಿ ।
ದಾವರಿಸಿತೆನ್ನವನು ಕಂಡ್ಯೆ ।
ಕಾವಕರುಣಿಗಳಿಲ್ಲ ವಿದನೋಡೆಂದುದಾವಾಯೆ ॥ ॥೩॥

ಪವನಸುತ ನೋಡೆನ್ನ ಪ್ರಾ್ರರ ।
ದ್ಭವನು ನಿಲ್ಲದೆ ಹೋಗಿ ಹೇಳೆಂ ।
ದವನಿಪನ ಮಜ್ಜೀವಿತೇಶನ ಮನುಕುಲಾಧಿಪನ ॥
ವನಿತೆಯಾಶೆಯ ಬಿಟ್ಟಯೋಧ್ಯೆಗೆ ।
ರವಿತನೂಭವ ಸಹ ಸುಮಿತ್ರಾ ।
ಭವನುಸಹಿತವೆ ಹೋಗಹೇಳೆಂದೊದರಿತಾವಾಯೆ ॥ ॥೪॥

ಹನುಮಂತ– ವೀರರೊಳಗ್ಗಳನು ನೀಜಂ ।
ಭಾರಿಜಿತುವೆಂಬೀ ಪ್ರತಿಜ್ಞೆಯ ।
ಭಾರಣೆಯ ಹೆಸರುಳ್ಳವನು ಕಳೆಯದಲಿ ತಿಳಿದವನು ॥
ನಾರಿಯಸುವನು ಕೊಂದನೆಂಬಪ ।
ಕೀರ್ತಿಯನು ಕೈವಿಡಿದು ಕೆಡದಿರು ।
ಸ್ವೈರಣೆಯಕೋಕೊಲೆಗೆ ಮನವನು ಮಾಡಬೇಡೆಂದ ॥ ॥೫॥

ಬಿಡುದುರಾತ್ಮರ ಬುದ್ಧಿಯನು ಕೈ ।
ವಿಡಿಯದಿರು ದುಷ್ಕೀರ್ತಿಯನು ಸಂ ।
ಗಡಿಗನಾಗದಿರಸುರಕೈಲಪಜಯನಿತಂಬಿನಿಯ ॥

ಕಡೆಗೆ ನೀನೀ ಸತಿಯ ಕಡಿದಡೆ ।
ಕಡಿದುಬಿಸುಡದೆ ಮಾಣನಿನಕುಲ ।
ದೊಡೆಯ ನಿಮ್ಮನ್ವಯದ ವಿಪಿನವನೆಂದನಾ ಹನುಮ ॥ ॥೬॥

ಇಂದ್ರಜಿತು—ನೋಡುನೋಡೆಲೆ ಹನುಮ ಸೀತೆಯ ।
ನೋಡು ಕಂಡಾಕಾಣೆನೆನ್ನದೆ ।
ನೋಡೆನುತ ಬೊಬ್ಬಿರಿದು ರಥದಗ್ರದಲಿ ಖಂಡೆಯುವ ॥
ನೀಡುಝುಳಪಿಸಿ ಹಾಸಮಿೂರಜ ।
ಕೇಡುಕಂಡ್ಯೆಯಂಬಮಾಯಾ ।
ಜೋಡಣೆಯ ಜಾನಕಿಯ ಕಡಿದಿಳುಹಿದನು ಧರಣಿಯಲಿ ॥೭॥

ಹನುಮನು ಜಾಂಬವಂತನಿಗೆ—

ಚಿತ್ತವಿಸಿದಿರೆ ಜಾಂಬವರೆ ರಘು ।
ಜೋತ್ತಮನ ಲಲಿತಾಂಗಿಯನು ಮು ।
ಗಿಯಿತ್ತು ಕಂಡಿರೆ ರಾಜಕಾರಿಯ ರಾಘವೇಶ್ವರನ ॥
ಕತ್ತಲೆಗೆ ತಾವಾಯ್ತು ಬೆಳಗಡ ।
ಗಿತ್ತು ಹಗೆ ತಾನಿನ್ನುರಣದಲಿ ।
ಸತ್ತಡೇನ್ ಮೇಣಿದ್ದಡೇನಿದಕಂಡಿರೇಯೆಂದ ॥೮॥

ರಾಮ— ರಾಜವಂಶದೊಳಧಿಕ ನೃಪಋಷಿ ।
ರಾಜಿಪರಮೇಶ್ವರನ ನಿಮಿಕುಲ ।
ರಾಜರಾಜಾಧೀಶ್ವರನ ಸುಕುಮಾರಿಗಕಟಕಟ ॥
ಈ ಜುಗುಪ್ಸೆಯ ಮರಣವನು ವಿಧಿ ।
ಯೋಜಿಸಿದನೇ ಸೀತೆಹಾ ನಿಮಿ ।
ರಾಜನಂದನೆ ಹಾಯೆನುತ ಹೊರಳಿದನು ರಘುನಾಥ ॥೯॥
ಹಗೆಯ ಕೊಲಲರಿಯದೆ ಛಲೋಕ್ತಿಯ ।
ನಗಲಿಸಿದನೆಂದೆಂಬ ಮನಸಿನ ।
ಬಿಗುಹ ಬಿಡುನಂಬುಗೆಯ ಕೋಕೊಲುವೆನು ದಶಾನನನ ॥

ನಗೆಮುಸುಡ ಮಾಡಿನ್ನು ನುಡಿಮಾ ।
ತುಗಳು ಹೊರವಡಲೆನ್ನ ಕೂಡಿಸು ।
ತಗಡುತನವೇನಕಟ ಕೃಪೆನಿನಗಿಲ್ಲಲಾಯೆಂದ ॥೧೦॥

,, ಏಕಪತ್ನಿ ವ್ರತದ ನಿಷ್ಠೆಯ ।
ನೂಕಿದೆನೆ ನಡವಳಿಯೊಳಮಲೇ ।
ಕ್ಷ್ವಾಕುಲಕುಲಜರಕೀರ್ತಿಯನು ಕೆಡಿಸಿದೆನೆದುಷ್ಕೃತಿಗೆ ॥
ಸೋಕಿದೆನೆ ಶೃತಿಮತಕೆ ಸಲ್ಲದ ।
ಕಾಕರನು ಕೂಡಿದೆನೆ ತನ್ನೊಡ ।
ನೇಕೆನೀಮಾತಾಡೆ ನಿನಗಿದು ಗುಣವೆಹೇಳೆಂದ ॥೧೧॥

,, ವನಕೆಬರಬೇಡೆಂದು ನುಡಿದರೆ ।
ಮನಕೆತಾರದೆ ಬಂದೆನಿಮ್ಮಯ ।
ಜನಕಕೇಳಿದಡೇನ ಹೇಳುವೆ ಮತಿಯದೇನೆನಗೆ ॥
ಜನನಿಯರಿಗೇನನೆಂಬೆ ಭರತಂ ।
ಗನುಜ ಶತೃಘ್ನರಿಗೆ ಸೀತೆಯ ।
ನನುವರಿದು ರಣಬಲಿಗೆ ಚಾಚಿದೆನೆಂಬೆನೇಯೆಂದ ॥೧೨॥

,, ಸೇವೆಯಲಿ ತೊತ್ತಾಗಿಹೆಪ್ರ ।
ಜ್ಞಾವಿಶೇಷಕೆ ಮಂತ್ರಿಯಾಗಿಹೆ ।
ಭಾವಿಸಲುಸಖ ಮಾಳ್ಪಪರಮಸ್ನೇಹವನು ಮಾಳ್ಪೆ ॥
ತೀವಿದತಿಶಯರತಿಗೆ ವಿವಿಧಕ ।
ಳಾ ವಿಚಿತ್ರದ ವೇಶ್ಯೆಯಾಗಿಹೆ ।
ಭೂವಧುವಿನಂತೆನಗೆ ತೋರುವೆ ಸ್ಥೈರಣೆಯಲೆಂದ ॥೧೩॥

ಆಕಾಲಕ್ಕೆ ವಿಭೀಷಣನು ಅಲ್ಲಿಗೆ ಬಂದು ಆ ಮೂರ್ತಿಯು ನಿಜ ಮೂರ್ತಿಯಲ್ಲ. ಅದು ಮಾಯಾ ಮೂರ್ತಿ, ಕಪಟದ ಕಾರ್ಯವೆಂದು ತಿಳಿಹೇಳಿ ರಾಮುನನ್ನು ಸಂತವಿಡುವನು.

ವಿಭೀಷಣ— ಬಂದನಾಸಮಯದಲಿ ಮಾನವ ।
ರಂದದಲಿ ಹಳಲಿಸುವ ಹರಿಯೆಡೆ ।
ಗಿಂದುಧರನ ಸಮಾನನಘದೂಷಣ ವಿಭೀಷಣನು ॥
ನಿಂದುನೋಡಿದನುಭಯನಾಟಕ ।
ದಂದವನು ಸರ್ವಜ್ಞನಲ್ಲಾ ।
ಕಂದಕೇಳಾ ಶರಣಜನದಾಭರಣ ನೀನೆಂದ ॥೧೪॥

,, ದೇವನೀಧಿಟನರನೆ ಸೀತಾ ।
ದೇವಿಯರು ಮಾನಿನಿಯೆ ಧಿಟಮಾ ।
ಯಾ ವಿಲಾಸಕೆ ಮರುಗುವರೆ ಸರ್ವಜ್ಞರಾದವರು ॥
ಹಾವುಗಳ ಹೆಜ್ಜೆಗಳ ಬಲ್ಲವ ।
ರಾವುನಿರ್ಮ್ಮಾಯಾಸುರಾಂಗವ ।
ನಾವುಬಲ್ಲೆವು ಬಿಡುವೃಥಾ ನಾಟಕೆವನೀನೆಂದ ॥೧೫॥

ಹೀಗೆಂದು ವಿಭೀಷಣನು ಇದು ರಾಕ್ಷಸರ ಮಾಯಾಕಾರ್ಯವು ನೀನು ಈಗಲೆ ಹನುಮಂತನನ್ನು ಅಶೋಕವನಕ್ಕಟ್ಟಿ ನಿಜವಾದ ಸೀತೆ ಇರುವಳೋ ಹೇಗೆ ಪರೀಕ್ಷಿಸಿ ತಿಳಿದುಕೊ ಎಂದು ಹೇಳಿ ಹನುಮಂತನಂ ಕಳಿಸಿ ಸೀತೆ ಇದ್ದುದನ್ನು ಕಂಡು ರಾಮನನ್ನು ಅಳಲಿನಿಂದ ಬಿಡಿಸುವನು.

ರಾಮಾಯಣ ಕಾಲದಲ್ಲಿ ರಾಕ್ಷಸರಲ್ಲಿ ಅರ್ಥಾತ್ ಅನಾರ್ಯರಲ್ಲಿ ಕೃತ್ರಿಮ ಮೂರ್ತಿಯಂ ರಚಿಸಿ ಅದು ಮಾತಾಡುವಂತೆ ಮಾಡುವ ಕಲೆಯು ರೂಢವಾಗಿತ್ತೆಂಬುದು ಈ ಮಾಟದ ಸೀತೆಯ ಕತೆಯಿಂದ ಕಂಡುಬರುತ್ತದೆ. ಇಪ್ಪತ್ತನೆಯ ಶತಮಾನದಲ್ಲಿ ಪಾಶ್ಚಿಮಾತ್ಯ ವಿಜ್ಞಾನ ಶಾಸ್ತ್ರಿಗಳು ಚಲನ ಚಿತ್ರಗಳಿಂದ ಮಾತಾಡಿಸುವ ಶೋಧವನ್ನು ಪೂರ್ತಿಗೊಳಿಸಿರುವರು. ಮತ್ತು ಕೃತ್ರಿಮ ಹೃದಯ, ಪುಪ್ಪುಸ ಮೊದಲಾದವುಗಳನ್ನುಂಟುಮಾಡಿ ರೇಡಿಯೋದ್ವಾರಾ ಅದನ್ನು ಕೆಲಹೊತ್ತು ಮಾತಾಡಕಲಿಸಿರುವರು. ಇದಕ್ಕೆ

Robot ಎಂತ ಕರೆಯುವರು ಕೆಲ ಡಾಕ್ಟರರು ಈ ರೋಬೋಟ ಎಂಬ ಕೃತ್ರಿಮ ಮನುಷ್ಯನ ಹೊಟ್ಟೆಯಲ್ಲಿ (ಕೃತ್ರಿಮ) ಕೆಲವು ಪದಾರ್ಥಗಳನ್ನಿಳಿಸಿ ಅವು ಕೆಲವು ರಸಾಯನ ದ್ರವ್ಯಗಳಿಂದ ಜೀರ್ಣಿಸುವಂತೆ ಸಹ ಮಾಡಿರುವರು. ವಿಜ್ಞಾನ ಶಾಸ್ತ್ರದಲ್ಲಿ ರಾಕ್ಷಸರು ಈ ಪಾಶ್ಚಿಮಾತ್ಯ ಶಾಸ್ತ್ರಗಳಿಗಿಂತ ಎಷ್ಟೋ ಹೆಜ್ಜೆ ಮುಂದಿದ್ದರೆಂದುತಿಳಿಯುವದು. ಲಂಕಾಪಟ್ಟಣದ ವರ್ಣನೆಯನ್ನು ನೋಡಿದರೆ, ಈಗಿನ ನ್ಯೂಯಾರ್ಕಪಟ್ಟಣದಂತೆ ಅನೇಕ ಅಂತಸ್ತಿನ ಮನೆಗಳಿದ್ದಂತೆ ಕಂಡು ಬರುವುದು. ಈ ವರ್ಣನೆಗಳಿಂದ ಆರ್ಯರಿಗಿಂತ ಅನಾರ್ಯರು ನಾಗರಿಕತೆಯಲ್ಲಿ ಮುಂದರಿದಿದ್ದರೆಂಬುದು ಒಡೆದು ತೋರುವದು. ಇದರಂತೆ ಯುದ್ಧಕಲೆಯಲ್ಲಿಯೂ ಅವರದು ಒಂದು ಹೆಜ್ಜೆ ಮುಂದೇ ಇತ್ತು ಈಗಿನ ಸಂಸ್ಕೃತಿಯು ಅನಾರ್ಯರ ಪ್ರಗತಿಯ ಮುಂದೆ ನಿವಾಳಿಸುವಂಥಾದ್ದಿತ್ತೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.



## ೮ನೆಯ ಪಾಠ.

## ರಾವಣನು ಯಾರ ಹಿತವಚನವನ್ನು ಕೇಳದೆ ತನ್ನ ಛಲವನ್ನೇ ಸಾಧಿಸುವನು.

(ರಾವಣನು ತಾನು ಅಜಿಂಕ್ಯನೆಂದು ಗರ್ವಗಿರಿಯನೇರಿ ತನ್ನ ಹಿತಚಿಂತಕರು ಸೀತೆಯಂ ಬಿಟ್ಟುಕೊಡೆಂದು ಬುದ್ಧಿ ಹೇಳಿದರೂ ತನ್ನ ಛಲವನ್ನೇ ಸಾಧಿಸುವನು. ರಾವಣನ ಪರಮ ವಿಶ್ವಾಸಿಕನಾದ ಶುಕನು ಶತೃಸೈನ್ಯವನ್ನು ಪರೀಕ್ಷಿಸಿ ಆತನಿಗೆ ಸೀತೆಯಂಬಿಟ್ಟುಕೊಡಲು ಉಪದೇಶಿಸುವನು, ಆದರೆ ರಾವಣನು ತನ್ನ ಬಾಹುಬಲ ರಣಬಲದ ಮೇಲೆ ವಿಶ್ವಾಸವಿಟ್ಟು ಆತನ ಸಲಹೆಯನ್ನು ತಿರಸ್ಕರಿಸುವನು.)

ಶುಕ— ಸಾವು ತನಗಿಲ್ಲನುಜನೀಲ ।
ಗ್ರೀವರಿತ್ತಾಯುಷ್ಯವುಂಟಿಂ ।
ಬೀವಿಚಾರವಬಿಟ್ಟುಕಳಿಕಮಲಜಭವಾದಿಗಳ ॥
ದೇವನಲ್ಲಾ ದೈತ್ಯರಿಪುಮನ ।
ಕಾವ ಸಂಶಯಬೇಡ ಸೀತಾ ।
ದೇವಿಯರನೊಯ್ದಿತ್ತು ಮರೆಯೊಗು ರಾಘವೇಶ್ವರನ ॥೧॥

,, ವೀರನೀ ರಘುನಾಥಶೌರ್ಯೋ ।
ದ್ಧಾರನೀ ರಘುನಾಥಕರುಣಾ ।
ಸಾರನೀರಘುನಾಥ ಶರಣಾಗತಜನಾವಳಿಗೆ ॥
ಚಾರುತರ ಸುರಧೇನುವೆಂಬೀ ।
ಸ್ವೈರಣೆಯಶಿರಿವ್ಪೈಯೊಳಿದೆಕಂ ।
ಣಾರೆ ನೋಡೆಲೆಯರಸ ಕೇಡುಗತನವನುಳಿದೆಂದ ॥೨॥

ರಾವಣ— ಯಾಕೆನಿನಗೀ ಮಾತುಮಾನವ ।
ಕಾಕಕೋಡಗವಿಂಡು ಹೊಗಳಿದ ।
ಡಾಕುಳಿಗೆ ಹುಲಿಯಂಜುವದೆ ಹವಣರಿಯದಾದೆಯಲ ॥
ನೂಕಿ ನೋಡಾರಣದಿಯಿನಿಬರ ।
ನಾಕ ನಿಳಯವಮಾಡದಿರೆಲೋ ।
ಕೈಕ ವೀರನೆನಿಪ್ಪ ಬಿರುದನು ಹರಿದುಬಿಸುಡುವೆನು ॥೩॥

ಲಂಕೆಯ ದುರ್ಗವನ್ನು ಕಪಿನಾಯಕನು ಹಾಳುಮಾಡಿದ್ದನ್ನು ಕಂಡು ಮುಂದೆ ವಿಪರೀತ ಅನರ್ಥವಾಗಬಾರದೆಂದು ಚಿಂತಿಸಿ ರಾವಣನ ತಾಯಿಯಾದ ಕೈಕಸೆಯು ಕಂಬನಿಗಳಂ ಸುರಿಸುತ್ತ ಮಗನಾದ ರಾವಣನೆಡೆಗೆ ಬಂದು ಕೆಳಗೆ ಹೇಳಿದಂತೆ ಆತನಿಗೆ ಸದ್ಬೋಧೆಮಾಡುವಳು.

ಕೈಕಸೆ— ಮಗ ವಿಭೀಷಣ ನಿನಗೆ ಹೇಳಿದ ।
ಬಗೆಬರುತ್ತಿದೆ ದುರ್ಗವಿದಕ್ಕೈ ।
ಮಗುಚಿಕೊಂಡವರುಂಟೆ ಸುರಮಾನವ ಭುಜಂಗರಲಿ ॥

ಹಗಲುಕತ್ತಲೆ ಯಹುದುಕತ್ತಲೆ ।
ಹಗಲಹುದು ತಾನಿದುವೆಕಡುಸೋ ।
ಜಿಗವಲಾ ನೀನೋಡಿಕೋಯೆಂದಳನುನಯೋಕ್ತಿಯಲಿ ॥೪॥

ಸ್ಮರವಿಕಾರಗ್ರಹದ ಸೊಂಪಗೆ ।
ಮರುಳುಗೊಡಬೇಡೈಯ್ಯ ಕಾಮನು ।
ಕರುಣೆಯೇ ಕೊಲೆಗಾರರಿಗೆ ಗುರುವೈರವರ್ಗದಲಿ ॥
ಪರಸತಿಗೆ ಮನವಿಕ್ಕಿ ಕಾಲನ ।
ಕರಕರಗೆ ಸಂದುವರು ಹಲಬರು ।
ಹರಹುಸೌಖ್ಯದಲಪ್ಪ ಬಲಿಕೆಬಹಳವರ್ಗದಲಿ ॥೫॥

ಕೈಕಸೆ— ತನುಜ ಕೇಳ್ಳೈ ಸೀತೆನರಮಾ ।
ನಿನಿಯೆ ನಿನಗೇನರಿಯಬಾರದೆ ।
ವಿನುತ ಪಾತಿವೃತ್ಯದನುಪಮ ಸುವ್ರತತ್ವದಲಿ ॥
ಮನುಜನೇ ನರನಾಥನಾತನ ।
ಘನ ಚರಿತ್ರವನರಿಯ ಬಾರದೆ ।
ಮನದ ವೈರವ ಬಿಟ್ಟು ಸುಖಿಯಾಗೆಂದಳರಸಂಗೆ ॥೬॥

,, ವಿಷಯಲಂಪಟತನದಿ ಮೂರ್ಖರ ।
ನೊಸಲಭೂಷಣವಾಗಿ ಕೀರ್ತಿಯ ।
ಹೆಸರನಳಿದನು ಪುತ್ರ ಮಿತ್ರ ಜ್ಞಾತಿಬಾಂಧವರ ॥
ಅಸುವಿಗಂತಕನಾದ ನೀ ಕೈ ।
ಕಸೆಯ ಮುನಿಪತಿ ವಿಶ್ವವಸುವಿನ
ಬಸುರಿನಲಿ ಬರತಕ್ಕ ಮಗನಲ್ಲೆಂಬುದೀಲೋಕ ॥೭॥

ಮಾಲ್ಯವಂತ– ಆದಿಯಲಿ ಕೇಳ್ದರಿಯಲಾ ಪ್ರಹ ।
ಲ್ಹಾದ ಬದುಕಿದ ಹಗೆಯ ವೈರವ ।
ಸಾಧಿಸಿಯೆ ಸತ್ತನು ಹಿರಣ್ಯಕನೆಂಬಸಂಗತಿಯ ॥

ಕೈದುಡುಕು ಲೇಸಲ್ಲ ಖಳಕುಲ ।
ಸೂದನನ ಕೂಡಕಟ ಜೀವವ ।
ಕಾದುಕೋ ಕಾಮುಕರ ಚಾಳಿಯು ಬಿಟ್ಟು ಕಳೆಯೆಂದ ||೮||

,, ವರವು ನಿನಗಜನಿಂದ ಮಿಕ್ಕಿನ ।
ನರಸುರೋರಗ ಯಕ್ಷ ರಾಕ್ಷಸ ।
ಗರುಡ ಗಂಧರ್ವಾದಿ ನಾನಾ ದೇವ ಯೋನಿಯಲಿ ||
ಮರಣವಿಲ್ಲೆಂದಣುಗ ಕೇಳೀ ।
ನರನರೇಶ್ವರರಿಗಳಾಗಿಯೆ ।
ಧುರಕೆನಿಂದವರು ನೀನಿವನು ಲೇಸಾಗಿ ತಿಳಿಯೆಂದ ||೯||

ರಾವಣ— ಮಾತಾಮಹ ಪಿಪೀಲಿಕ ।
ದಾಳಿಗಿರದೇ ಗೋಷ್ಪದದಕೀ ।
ಲಾಲವಿಲಯಾಂಬುವಿನವೊಲು ನಿಮ್ಮ ಕ್ಷಿಗಾರಘೂಜ ||
ಸ್ಥೂಲನೆನಗಣುಮಾತ್ರವಿದನೀವ್ ।
ಹೇಳದಿರಿ ಕತೆಗಳನು ನಾವಿದ ।
ಕೇಳಿಬಲ್ಲೆವುಸಾಕು ಬಿಜಯಂಗೈರಿನೀವೆಂದ ||೧೦||

ಎಣಕೆನಿಮಗಿದು ವಿಷ್ಣುವೀತನ ।
ಕೆಣಕಬೇಡೀತನನು ನೀವೆಂ ।
ದಣಕವಿಕ್ಕುವರ್ರೈಸಲೇನಾವಂಜೆವಾಹವಕೆ ||
ರಣಮುಖದೊಳಸುಸರಿಸದರಿವಾ ।
ರ್ಗಣದ ಜಯಮುಖ ಕೀರ್ತಿಯನುಪಡೆ ।
ವೆಣಿಕೆ ನಮ್ಮದು ನಿಮ್ಮಬಗೆಯನು ಬಗೆವನಲ್ಲೆಂದ ||೧೧||

ಕೈಕಸೆ— ಮರುಳುತನಬೇಡೆಲೆ ಮಗನೆದು ।
ರ್ಧರವು ದೈವದಕೂಡೆ ಸುಲಭವೇ ।
ಹಿರಿಯರಾಡಿದಮಾತನಕಟಾ ಮನ್ನಿಸುವುದೆನಲು ||

ಸ್ಮರನಗರುಡಿಯ ಶ್ರಮವುಜೀವದ ।
ಸರಸಕೇಳಿಲಿ ಕಂದಕೇಳನು ।
ಸರಿಸುನಮ್ಮಯ ಮಾತನೆಂದಳು ಮುಗಿದುಕರಯುಗವ ||೧೨||

ರಾವಣ— ಧರಣಿತಳಕೆಳಗಾಗಲುರುಳಲಿ ।
ತರಣಿಬಿಂಬವದಭ್ರದಜಶಂ ।
ಕರರುಕೂಗಿಡಲಬುಧಿ ಮುಸುಕಲಿ ಮುರಿಯಲಮರಾದ್ರಿ ॥
ತಿರುಗಿ ಸೀತೆಯಬಿಟ್ಟೆನಾದರೆ ।
ವರಪುಲಸ್ತ್ಯಜ ನಲ್ಲನಮ್ಮನು ।
ಕರಕರಿಸಬೇಡೇಳಿ ಯೆಂದವದಿರುಹಿದನುಮುಖವ ||೧೩||

# ೯ನೆಯ ಪಾಠ

# ಅತಿಕಾಯನ ರಣೋತ್ಸವ

(ಅತಿಕಾಯನೆಂಬವನು ರಾವಣನ ಮಕ್ಕಳಲ್ಲಿ ಶೂರ ಪುತ್ರನು. ಆತನು ರಣಕ್ಕೆ ಸಿದ್ಧನಾಗಿದ್ದರೂ ತನ್ನ ತಂದೆಗೆ ಸೀತೆಯ ಬಗ್ಗೆ ಬುದ್ಧಿವಾದ ಮಾಡಲೆಳಿಸಿ ರಾವಣನನ್ನು ಕುರಿತು ಕೆಳಗಿನಂತೆ ಎಚ್ಚರ ಕೊಡುವನು.)

ಅತಿಕಾಯ— ಎಲೆ ನಿಶಾಚರ ರಾಯ ತಾಮಸ ।
ತಿಳಿಯದಿನ್ನೂ ನಿನಗೆ ನೀನೇ ।
ಕೊಲುವವನು ಲಯಕತೀತನೀತನು ನಿನ್ನ ಗಂಟಲಲಿ ||

ಇಳಿವನೇ ರಘುನಾಥ ನಾರೆಂ ।
ದೊಳಗನರಿಯದೆಲಾ ನಿಶಾಚರ ।
ಕುಲಕುಲಾಚಲವಜ್ರದಂಡನೊಳಕಟನೀನೆಂದ ॥೧॥

,, ನೂಕಲರಿಯದು ಜಯವು ನಿನಗಿ ।
ಕ್ಷ್ವಾಕುಕುಲಪಾಲಕನೊಳೀಜಗ ।
ದೇಕನಾಥನೊಳಕಟ ನರನೇರಾಮನೋಡಲಿಕೆ ॥
ಯಾಕೆನಿನಗೀಮರುಳುತನ ವೈ ।
ಸೋಕುಸಲ್ಲದು ಸೀತೆಯಲಿ ಪರಿ ।
ಪಾಕಚಿತ್ತದೊಳಿಲ್ಲವಕಟಕಟೆಂದನತಿಕಾಯ ॥೨॥

,, ವಿಾರಿಕಾದಿದಡೀತನಲಿ ಜಯ ।
ಸೇರುವದೆ ನಿನಗಕಟ ಜಯದು ।
ಬ್ಬೇರ ಬಡವರಿಗುಂಟೆ ತೊತ್ತುಕಣಾ ಖರಾಂತಕನ ॥
ಸಾರಿದೆನು ನಿನಗಕಟಫಲವನು ।
ಕೂರುಕೊಳದಿರು ಕೇಳುಹೇಳುವೆ ।
ತೋರುವೀದೈವದ ಮಹಾತ್ಮವನೆಂದನತಿಕಾಯ ॥೩॥

,, ಭುವನವೀತನ ದೇಹ ವೀದಿಗು ॥
ನಿವಹವೀತನ ಕಿವಿಗಳೀಶಶಿ ।
ರವಿಗಳೀತನ ಕಣ್ಗಳೀ ಪವಮಾನನುಸುರುಕಣಾ ।
ಭುವನನಿಧಿಯಾಗೀ ಮಹಾತ್ಮನ ।
ಬೆವರು ಕಮಠನುಪಾದಮಸ್ತಕ ।
ದವಿಕಳದಕೇಶಾಗ್ರ ವೀಯಾಕಾಶಪರಿಯಂತ ॥೪॥

ನೆಲೆಯನರಿವ ಮಹ್ಹಾತ್ಮರುಗಳಿಗಂ ।
ಗುಲಹತ್ತನು ಮಿಕ್ಕಹನು ಮನ ।
ನಿಲುಕಿತೆಂಬರಿಯುಳ್ಳರಿಗೆ ವೈದೋರದಿಹನುಕಣಾ ॥

ಸುಲಭನೆಂಬ ಮಹಾನುಭವರಿಗೆ ।
ಜಲದ ಲಿಪಿಯಂತಿಹನು ಯೋಗದ ॥
ಬಲುಮೆಗೊಲಿಯದವೊಲಿಹನೀರಾಮ ನೋಡೆಂದ ॥೫॥

ಆರೊಡನೆಕೈಸೋಂಕುಕದನವ ।
ದಾರಕೂಡೆಪಚಾರಣೆಯು ಬಿರಿ ।
ದಾರಹತ್ತಿರಮೂದಲೆಯವಾತಾರಸರಿಸದಲಿ ।
ಆರಿದರ ಲತಿಮಥನ ಕೇಳಶ ।
ರೀರನೊಳುಗೋಚರವಿಹೀನನೊ ।
ಳಾರುಭಟೆನಿನಗೆಂತು ಮೆರವುದು ತಂದೆಹೇಳೆಂದ ॥೬॥

ಇರಿತ ಕಂಬರವಳುಕುವುದೆ ನೊರ ।
ಜುರುಬಲಗ್ನಿಗೆ ನೋವುದೇ ಕೆ ।
ಟ್ಟೆರುಹೆಕಚ್ಚಿದರಳುವುದೇ ಸುರಗಿರಿನಿಧಾನಿಸಲು ।
ಉರುಬಿಗೊಂಡೆಳಿಗುಬ್ಬಿಗುಡಿದರೆ ।
ಬರತುವುದೇ ಜಲರಾಶಿ ರಾಮನೊ ।
ಳಿರಿತಕೊಂಬುದೆ ನಿನಗೆ ಹೇಳ್ಕೈತಂದೆ ತನಗೆಂದ ॥೭॥

ಧಿಟವಿಚಾರಿಸಲೀತನನು ನೀ ।
ನಟಮಟಸಿ ಗೆಲುವವನೆಸೀತೆಗೆ ।
ವಿಟತನವ ಮಾಳ್ಪವನೆ ಮಾಯಾ ಪ್ರಕೃತಿ ಪುರುಷನಲಿ ।
ಘಟಿಸುವುದೆ ದುರ್ನಯವು ಮೃಣ್ಮಯ ।
ಘಟವಜಾಂಡವಕೆ ತಕುವುದೆ ಚಾ ।
ವಟಿಯತನವಿದು ಜೀಯ್ಯಜಾಣರ ಮತವಿದಲ್ಲೆಂದ ॥೮॥

ಈತಮುಳಿದಹಿತರನು ರಕ್ಷಿಸಿ ।
ದಾತಗಳು ಮುನ್ನುಂಟೆ ಪೂರ್ವದ ।
ಲೀತರಕ್ಷಿಸಿಧವರ ಕೊಂದವರುಂಟೆ ಪೂರ್ವದಲಿ ॥

ಯಾತಕಕಟಾ ಭ್ರಾಂತಿ ಭೂಸಂ ।
ಜಾತೆಯನು ಕೊಂಡೊಯ್ದು ಕೂಡುಸಹ ।
ಜಾತನನು ಕರತಂದು ಸುಖದಲಿರಾಜ್ಯವಾಳೆಂದ ॥೯॥

ನಿನ್ನ ಹವಣೇ ನೀತನಲಿ ರಣ ।
ರನ್ನ ವನುಸವದರು ಶೆಣಸಿದರು ।
ಮುನ್ನಿನವರೊಳಗೇಕದೇಶಕೆ ಬಹೆಯೊ ಬರದಿಹೆಯೊ ॥
ನನ್ನಿಯಿದು ಮಧುಕೈಟಭಾದಿಗ ।
ಳುನ್ನತಿಕೆ ಯೇನಾಯ್ತು ಶೃತಿಭೂ ।
ಕನ್ನೆಯನುಕದ್ದವನ ಕಡುಹೇನಾಯ್ತು ಹೇಳೆಂದ ॥೧೦॥

ಖರವೀರರಹ ಸುಬಾಹು ಮಾರೀ ।
ಚರುಗಳೇನಾಗರು ಬಲಾನ್ವಿತ ।
ಸುರಪಸುತನೇನಾದ ನಿತ್ತಲಃ ನಿಮ್ಮಸೇನೆಯಲಿ ॥
ಕೆರವ ಮಾಜಿಸಿಕೊಂಬ ಸುಭಟರ ।
ನೆರವಿತಾನೇ ನಾಯ್ತುರಕ್ಕಸ ।
ರರಸನಲ್ಲಾ ಕುಂಭಕರ್ಣನ ನೆಲ್ಲಿತೋರೆಂದ ॥೧೧॥

ಮರೆಯದೇಕಿನ್ನಾದರೆಯು ಬಿಡು ।
ಶರೆಯ ಸೀತೆಯ ಹೆಚ್ಚುಕುಂದಿನ ।
ಕೊರತೆಬಾರದು ಭಾವಿಸೀ ನುಡಿವೇದಮತವೆಂದು ॥
ಹೊರದಿರಪಕೀರ್ತಿಯನು ಪಾತಕ ।
ತರಿಸದಿರು ದುರ್ಜನರು ಬಳಸುವ ।
ಕೆರೆಯಕಲ್ಲಿನಕಟ್ಟೆಯಾಗದಿರೆಂದನತಿಕಾಯ ॥೧೨॥

ರಾವಣ— ಎಲವೊ ಕೇಳತಿಕಾಯಮತಿಗಳು ।
ನಿಲುಕಲರಿಯವು ತುದಿಗೆನಿಮ್ಮವು ।
ನಿಲುಕಡೆಗಳವು ಬೇರೆಮಾರೀಚನ ವಿಭೀಷಣನ ॥

ಬಳಿಕ ಕೈಕಸೆಮಾಲ್ಯವಂತರ ।
ತಿಳುಹುಗಳು ತುದಿನಿನ್ನ ದೈಸಲೆ ।
ಕಲಹಕಂಜುವಡತ್ತಲಾಕಾಳ್ಗಿಡೆಯ ಬೇಡೆಂದ ॥೧೩॥

ಕಥೆಯನಾನಿದ ಕೇಳಿದೆನು ಕಡು ।
ಶಿಥಿಲವಾದವು ಹಿಂದಕಿವುರಿಪು ।
ಮಥನವುಂಟೇ ಹೇಳು ಬೊಮ್ಮನ ಮಾತದಂತಿರಲಿ ॥
ಮಿಥಿಲಜೆಯ ಬಿಡೆ ಬಿಡೆ ಛಲೋಕ್ತಿಯ ।
ಮಥನವನು ಬಿಡೆರಾಮನಲಿ ಪುರ ।
ಮಥನಕೂಗಿಟ್ಟಡೆಯು ಕಡೆಯಿಣಮಾತದೀಗೆಂದ ॥೧೪॥

ಅತಿಕಾಯ— ಅಹುದುಮತ್ತೇನಾರ ಚಿತ್ತದ ।
ಲಿಹುದನವರೇ ತಾ ಬಲ್ಲರಿದು ತಾ ।
ವಿಹಿತವೇ ನಿನಗಾದಡೀ ವೀಳಯವನೆನಗೆನಲು ॥
ವಿಹಿತವಿದು ನಮಗೆನುತಲಾ ದು ।
ಸ್ಸಹನುಬಳಿಕಾ ನಿರ್ಭಯನ ನಿ ।
ಸ್ಪೃಹನಕಳುಹಿದ ನಿತ್ತುವೀಳೆಯವನುಮಹಾಹವಕೆ ॥೧೫॥

## ಇನ್ನು ಅತಿಕಾಯನನುಪಮ ಶೌರ್ಯ:—

ತರಸಿ ತುಲಸೀದಂಡೆಗಳ ನಿಜ ।
ಶಿರಕಲಂಕರಿಸಿದನು ಕೊರಳಿನ ।
ಲಿರಿಸಿದನು ಕೋಮಲದ ವಿವಿಧಾಭರಣಗಳಸಹಿತ ॥
ವರಲಲಾಟದಲೂರ್ಧ್ವತಿಲಕವ ।
ಧರಿಸಿ ತಾಯಿಗೆ ನಮಿಸಿ ವೈಷ್ಣವ ।
ರರಸನಡೆದನು ಜನಮನೋಹರಕಾಯನತಿಕಾಯ ॥೧೬॥

ಬಹಡೆಬನ್ನಿ ಭವಾಬ್ಧಿಪೋತನ ।
ಬಹಳಪದವಿಯ ಬಯಸುವರೆನೀವ್ ।
ಬಹಡೆಬನ್ನಿ ಜರಾಮರಣವರ್ಜಿತವನ್ನೈದುವಡೆ ॥
ಬಹುದುಮುತ ವೈಕುಂಠವಾಸಿಯ ।
ಗೃಹದಭಕ್ತರ ಕೇಳಮೇಳದ ।
ಲಿಹುದು ನಿಮಗುಂಟಾದರೆಂದನು ಭಟರಿಗತಿಕಾಯ ॥೧೭॥

ಇಲ್ಲಿನಿಂದಸಹಸ್ರಮಡಿನಿಮ ।
ಗಲ್ಲಿಸುಖಸಾಮ್ರಾಜ್ಯ ಸಂಪದ ।
ಗಿಲ್ಲಿಗಿಂದವೆ ಕೋಟಿಗುಣಬಯಕೆ ಫಲಪ್ರಾಪ್ತಿ ॥
ಇಲ್ಲಿಗಿಂದತಿಶಯ ಮನೋಹರ ।
ವಲ್ಲಿ ಹುಸಿಯೆನಬೇಡ ಲಕ್ಷ್ಮೀ ।
ವಲ್ಲಭನಪದದಾಣೆಬಹುದತಿಲೇಸು ನಿಮಗೆಂದ ॥೧೮॥

ಈಶನಹುದುಂಟಾದಡಂಭೋ ।
ಜಾಸನನ ರೂಪಹಡೆದಿವಿಜಾ ।
ಧೀಶನಹಡೆ ಚತುರ್ವಿಧ ಮುಕ್ತಿಯನು ಬಯಸುವಡೆ ॥
ಕೇಶವನಕೂಡುವರೆ ತಪದಭಿ ।
ಲಾಷೆಯಿಲ್ಲದೆ ತೀರ್ಥಯಾತ್ರಾ ।
ಯಾಸವಿಲ್ಲದೆ ಬಹುದೆನುತ ಹೊಯ್ಸಿದನು ಡಂಗುರವ ॥೧೯॥

ಮನೆಗೆ ಮನೆವಾರತೆಗೆ ಧನವಿಗೆ ।
ವನಿತೆಯರಿಗಭಿಲಾಷೆ ಮಾಡುವ ।
ಮನಬರಡಿರ ಜೀವದಾಸೆಯ ಜವನಕೈವಶದ ॥
ಅನುವರದ ಭಯಭರಿತರಿರಹಿಂ ।
ದನು ವಿಚಾರಿಸದಂಜದೊಂದೇ ।
ಮನದವೀರರು ಬನ್ನಿ ತನ್ನೊಡನೆಂದನತಿಕಾಯ ॥೨೦॥

ಅಕಟ ಕೆಡಬೇಡಿದುವೆ ಪರಮಾ ।
ರ್ಥಕದನುಡಿ ಪರಬೊಮ್ಮ ವಿದರದಲಿ ।
ಪ್ರಕಟಿಸುತ್ತಿದೆ ಮರಳಿ ಬಯಸಿದಡಿಲ್ಲ ಗತಿನಿಮಗೆ ॥
ಸಕಲ ತೀರ್ಥಸ್ನಾನದಾನಾ ।
ಧಿಕ ತಪೋಯಜ್ಞಾದಿ ಫಲವಿವು ।
ಮುಕುತಿ ಪದ್ಧತಿಯಲ್ಲಿ ಬಲ್ಲರೆ ಬಹುದುಲೇಸೆಂದ ॥೭೧॥

ಅರಿಯಬೇಡಧ್ಯಾತ್ಮವಿದ್ಯೆಯ ।
ನರಿದೆವೆಂದೆನ ಬೇಡ ಬೊಮ್ಮವ ।
ನರಿದು ಭಜಿಸಲುಬೇಡ ಭಕ್ತಿಯಲಕಟ ಕರ್ಮದಲಿ ॥
ಕುರಿಗಳಾಗಲುಬೇಡ ಬೇಗೆ ।
ಚ್ಚರಿವಡೆದುದಾಸಮಯವಿದನುಳಿ ।
ದರಸಿದರೆ ಬಳಿಕಿಲ್ಲ ಕಲ್ಪಸಹಸ್ರಪರಿಯಂತ ॥೭೨॥

ಆವಸುಕೃತವಮಾಡಿನೋಡಿದ ।
ಡೀವಫಲವಿನಿತಿಲ್ಲ ನೋಡಿದ ।
ಡಾವಸಿದ್ಧಾಂತದಲಿ ನಾನಾದರ್ಶನಂಗಳಲಿ ॥
ಈ ವಿಶೇಷವ ಕಾಣೆ ನಿದುಮ ।
ತ್ತಾವ ಮಾರ್ಗದೊಳಿಲ್ಲ ಬಹುಮಾ ।
ಯಾವಿಲಾಸದ ಬಲೆಗೆ ಬೀಳದೆಬಹುದು ಲೇಸೆಂದ ॥೭೩॥

ಆದಿಪುರುಷನಪ್ರಮೇಯನ ।
ವೇದ ಸಿದ್ಧನ ವಿಶ್ವಪೂಜನ ।
ಭೂದಿವಾನಲಸಲಿಲ ಸೂರ್ಯಾತ್ಮಕನನಚ್ಯುತನ ॥
ಐದುವವರೈತನ್ನಿ ಹರಿಶಿರಿ ।
ಪಾದಭಜಕರು ಬನ್ನಿಪರತರ ।
ವಾದವಸ್ತು ವಿದಲ್ಲದಿಲ್ಲೆಂದೆತ್ತಿದನು ಕರವ ॥೭೪॥

ಮುತ್ತು ನೀರನಲಾದ ಬಳಿಕದು ।
ಮತ್ತೆ ನೀರಹುದೇ ಸುವರ್ನಕ ।
ವೆತ್ತ ಕಬ್ಬಿಣ ಮರಳಿಕಬ್ಬಿಣವಹುದೆ ರಸವಾಗಿ ॥
ಸತ್ತು ಹುಟ್ಟುವ ಹುಟ್ಟಿ ಹೊಂದುವ ।
ಸುತ್ತು ದೊಡಕಿನ ತೊಡಹನೊಲ್ಲದ ।
ಚಿತ್ತಶುದ್ಧಿಯ ಸುಭಟರೈತಹುದೆಂದನತಿಕಾಯ ॥೨೫॥

ಬಳಸಿಬಂದುದು ಬಳಿಕ ತತ್ವದ ।
ತಿಳಿವಿನಸುರರು ರಾಮಸೇನಿಜ ।
ವಳಿಯುದಮಲ ಬ್ರಹ್ಮವೆಂದೇ ಬುದ್ಧಿ ಭಾವದಲಿ ॥
ಕಲಿಗಳೈದಿದರಶ್ವದಂತಾ ।
ವಳಿ ವರೂಥಪದಾತಿಯಲಿ ನಿ ।
ರ್ಮಳ ಮನೋರಂಜಕನನಘಶತಕೋಟಿ ಭಂಜಕನ ॥೨೬॥

ಹೊಳಲ ಹೊರವಂಟನು ಸರಾಗದೊ ।
ಳೊಳು ಭಟಾವಳಿಸಹಿತಕಹಳಾ ।
ವಳಿಯ ಬಿರುದಿನ ಪಾಠಕರಕಳಕಳದರಭಸದಲಿ ॥
ನೆಲನನಳದತ್ರಿವಿಕ್ರಮನ ಮೈ ।
ಯಳರೆಯಲಿ ಮೈದೋರಿದನು ಕಪಿ ।
ಬಲವಿದಕಂಡು ಕಳವಳಿಸಿತ್ತು ನಿಮಿಷದಲಿ ॥೨೭॥

ಮಾರಿಬಂದದು ಮತ್ತೆ ಬಂದನೆ ।
ಘೋರ ರಕ್ಕಸ ಕುಂಭಕರ್ನನು ।
ವೀರರಾಘವನಿವನ ಕೊಂದುದು ನಿಜವೊಮೇಣ್ಪುಸಿಯೊ ॥
ಆರುಕಾದುವರಿವನೊಡನೆ ಮದ ।
ನಾರಿಮಲವಡಸಾಧ್ಯಸಾಕುಖ ।
ರಾರಿತಾನೇಕಾದಿ ಕೊಲುವವನೆನುತೋಡಿತಗಲವಲಿ ॥೨೮॥

ರಾಮ— ಇವನದಾರ್ರೈ ಸತ್ತುಕುಂಭ ।
ಶ್ರವಣ ಮತ್ತುದಯಿಸಿದನೋಬರಿ ।
ಸುವಿತದೇಗೆಲವೆಮಗೆ ಕಡುಕೌತುಕದ ಭಟನಹನು ॥
ಇವನ ರೂಪಿನ ರಕ್ಕಸರುನಿ ।
ಮ್ಮವನಕಟಕದಲೆನಿಬರೆಂಬುದ ।
ನಮಗೆಹೇಳೆಂದರಸ ಬೆಸಗೊಂಡನು ವಿಭೀಷಣನ ॥೨೯॥

ವಿಭೀಷಣ— ಈತನೀ ಗಲಿಜೀಯ ಬಾಹುಬ ।
ಲಾತಿಶಯನಾಹವಕೆ ಹಾವಿನ ।
ಲಾತಮಿಶ್ರಿಯಲೆಮ್ಮ ಬಲವನು ಬೆದರಿಸಿದಭಟನ ॥
ಮಾತೆಗಿವ ಮಗನಿವನವನಸಹ ।
ಜಾತನಿವನು ಕುಮಾರರಲಿ ವಿ ।
ಖ್ಯಾತನಿವ ನತಿಕಾಯನೆಂಬುದು ಹೆಸರಲೇಯೆಂದ ॥೩೦॥

ಅವನು ಕಡುಪಾತಕನು ಪುಣ್ಯ ।
ಶ್ರವಣನಿವನೆಲೆ ಜೀಯ ಜಗದೊಳ ।
ಗವನು ದೈವದ್ರೋಹಿ ಯಿವನು ಸದ್ದೈವನಸುರರಲಿ ॥
ಇವನವಗ ಪಡಿಗಟ್ಟಬಹುದಾ ।
ಹವದ ಚಿತ್ರತೆಗೆ ಮಿಕ್ಕಂ ।
ತಿವಗೆ ಸರಿಯ ಸುಭಟರಿಲ್ಲೆಲೆ ದೇವಕೇಳೆಂದ ॥೩೧॥

ಇನಿತಕೇಳ್ದಿನ ಸುತನು ಜಾಂಬವ ।
ಹನುಮ ನಳ ನೀಲಾಂಗದಾದ್ಯರು ।
ಮನದ ಭೀತಿಯ ಬಿಸುಟು ಮನುಕುಲ ಸಾರ್ವಭೌಮಕನ ॥
ಮನವಮುಚ್ಚಿಸಲಿದು ಸಮಯವೆಮ ।
ಗೆನುತ ತನುಗಳನೋವು ನೋಡದೆ ।
ಮನದಲರಿಭಟನಿದಿರಿನಲಿ ಮಾರಾಂತರಾಹವಕೆ ॥೩೨॥

ಹರಿಗೆ ಖಡ್ಗ ಕಠಾರಿಕುಂತದ ।
ಚರಣ ಚರರುಪ್ಪರದ ಕುದುರೆಯ ।
ಕರದ ಖಡುಗದರಾವುತರ ರಣವಾದ್ಯರಭಸದಲಿ ॥
ಕರಿಘಟೆಯ ಮೇಲಿಡಿದ ಜೋಧರ ।
ವರವರೂಥಾರೋಹಕರ ವೊರ ।
ಹುರದಿಮೇಳದಬ್ಬರಿಸುತೊಳಹೊಕ್ಕನತಿಕಾಯ ॥೩೩॥

ಏನುಹೊಗಳುವೆ ಕುಂಭಕರ್ಣಮ ।
ಹಾನಿಶಾಚರಗಿಮ್ಮಡಿಯುರಣ ।
ದಾನಿಕೆಯ ರಕ್ಕಸರ ರಣರಂಜಕದ ರೌರವದ ॥
ಸೂರೆಕಾರನ ಕೊಲೆಯಲಮರರ ।
ಮಾನಿನಿಯಲಪ್ಪುಗೆಯಲಡರುವ ।
ವಾನರಾನೇ ಕಾಣಲಾಯಬಂರದ ವಳಯಗಲಿ ॥೩೪॥

ಕೋಲಿಗೊಬ್ಬಬ್ಬರ ಸಮಿಾಕಸ ।
ಲೀಲೆಯನು ಸಂತೈಸಿ ಮಿಕ್ಕಿನ ।
ಬಾಲದಂಣಗಳಸುವನುಗಿವುತಯೊಕ್ಕವೈಗಳಲಿ ॥
ಕಾಲನುರವಣೆಯೋಕಪರ್ದಿಯ ।
ಕೋಲಗೊರೆಯೋ ಭೈರವನರಣ ।
ಕೇಳಿಯೋ ನಾನರಿಯೆನತಿಕಾಯನ ರಣೋತ್ಸವವ ॥೩೫॥

ಎತ್ತನೋಡಿದತ್ತ ತಲೆಗಳು ।
ಕತ್ತರಿಸಿ ಬಿದ್ದಿದವಕಪಿವೆಣ ।
ವೆತ್ತ ನೋಡಿದತ್ತ ಕೈಕಾಲುಡಿದ ಕಪಿಸೇನೆ ॥
ಎತ್ತ ನೋಡಿದಡತ್ತ ಕಪಿಗಳ ।
ನುಪ್ಪರಿಸಿ ನಿಗುರಿನ ।
ನೆತ್ತರಿನ ಮಯಪಲ್ಲದಿಲ್ಲಾ ಕಣಸೊಳಗಲದಲಿ ॥೩೬॥

ಮುಟ್ಟಿಕಾದಲು ಬಂದಹನುಮನ ।
ಕಟ್ಟಿದನು ಕಮಲಜಭವಾಸ್ತ್ರದೊ ।
ಳಿಟ್ಟಣಿಸುವತಿಬಲದ ಹೇರೊಡಲುಗಳೊಳಂಬುಗಳ ॥
ಒಟ್ಟಿದನು ತಟನೊಡನೆ ಬವರದ ।
ಬಟ್ಟೆಯನು ಬಾರದವೊಲಸುರಘ ।
ರಟ್ಟನಿದಿರಲಿ ಹೊಳಕಿದನು ಹೊಂದೇರೊಳತಿಕಾಯ ॥೩೭॥

## ಲಕ್ಷ್ಮಣನು ತನಗೆದುರಾಗಿ ನಿಂತು ಯುದ್ಧಮಾಡು ವದನ್ನು ಕಂಡು ಅತಿಕಾಯನು:—

—:○●○:—

ರಣಕೆನಮಗಾರಾದಡೇನದ ।
ರೆಣಿಕೆ ನಮಗಿಲ್ಲಾವು ಸಮರಾಂ ।
ಗಣದೊಳಾತ್ಮನಿವೇದಕರು ಸಚರಾಚರಾತ್ಮಂಗೆ ।
ರಣಕುತೂಹಲ ರಚನೆಯನು ಸುರ ।
ಗಣವು ನೋಡಲು ತೋರುವೆವು ಭಾ ।
ರಣಿಯ ಭಟನಾರಾದಡನುವಾಗೆನುತ ಬೊಬ್ಬಿರಿದ ॥೩೮॥

ಬಿಚ್ಚಿದನು ಬಳಿಕೀತನಸುರನ ।
ನಿಚ್ಚದೋಳ್ಕರಪಂಜರವ ಮುಗು ।
ಳೆಚ್ಚಬಾಣವ ಕಡಿದುನೋಯಿಸಿದನು ನಿಶಾಚರನ ।
ಚುಚ್ಚುವಸ್ತ್ರವ್ಯಥೆಯ ಸೈರಿಸು ।
ತೆಚ್ಚನವ ನೀತನನು ಕವಚವ ।
ನುಚ್ಚಿಮುಳುಗಿದವಂಬು ಲಕ್ಷ್ಮಣದೇವನಂಗದಲಿ ॥೩೯॥

ಅತಿಕಾಯ:— ನೀವು ಜಗದಧಿ ದೈವವೆಂಬುದ ।
ನಾವುಬಲ್ಲೆವು ನಮ್ಮ ಕುಲದ ಸ್ವ ।
ಭಾವ ವಿದನಾವ್ ಬಿಡಲು ಬಹುದೇ ಪೂರ್ವ ಪದ್ಧತಿಯ ।
ನಾವು ಮಾಡುವ ಸಮರಮುಖಸಂ ।
ಭಾವನೋಚಿತ ಸರಳಭಕ್ತಿಯ ।
ನೀವು ಕೈಕೊಳಬೇಕೆನುತ ತೆಗೆದೆಚ್ಚನತಿಕಾಯ ॥೪೦॥

ಲೇಸು ಲೇಸ್ಸೈ ಚಾಪತಂತ್ರವಿ ।
ಲಾಸವೊಳ್ಳಿತು ವೀರನಹೆಮಾ ।
ಮಾಸಮಗ್ರ ಪ್ರಬಲನಹೆ ರಘುಪತಿಯ ಪದದಾಣೆ ।
ಈಸುದಿನಕಾದಿದ ನಿಶಾಟನು ।
ಹಾಸುಭಟರಾಹವಕೆ ಮಿಗಿಲೆಂ ।
ದಾ ಸುಮಿತ್ರಾಸುತ ಸುರಾರಿಯ ನೆಚ್ಚುಬೊಬ್ಬಿರಿದ ॥೪೧॥

ಕಾಯಕಂಪಿಸಿತುರದೊಳದ್ದಿದ ।
ಸಾಯಕದಭೀತಿಯುಲಿನೊಂದನು ।
ಘಾಯದಲಿ ಹರುಷಿಸುವ ಮೂರ್ಛೆಯುಲಳಿಯು ಮರುಕದಲಿ ॥
ಆಯಿತಕಟಾ ತಂದೆ ರಾವಣ ।
ನಾಯುವಿಗೆ ಕಡೆಯೆನುತ ಶಿರಿನಾ ।
ರಾಯಣಧ್ಯಾನದಲಿ ಮುಕ್ತಿಗೆ ಮಾಡಿದನು ಮನವ ॥೪೨॥

ನರರಿಗೀಬಲುಹೆಲ್ಲಿಯದು ವಾ ।
ನರರಿಗೀಕಡುಹೆಲ್ಲಿಯದು ನರ ।
ಹರಿಯ ಲೀಲಾಚರಿತವಿದು ನಾವಿನ್ನು ಕಾದುವದು ॥
ಮರುಳುತನವೆನುತಂತರಂಗದ ।
ಸರಸಿಜದ ಕರ್ಣಿಕೆಯ ಮಧ್ಯದ ।
ಲಿರಿಸಿ ರಾಮನ ಮೂರ್ತಿಯನು ಸೌಮಿತ್ರಿಗಿಂತೆಂದ ॥೪೩॥

ಕಲಹಕಾವ್ ವೆಗ್ಗಳರು ಲೋಕಾ ।
ವಳಿಯ ವೀರರೊಳರಿದೆವಾವ್ ನೀವ್ ।
ಜಲರುಹಾಕ್ಷನ ಬಿಂಬವೆಂಬುದು ಮರೆಯವೂತೇನು ।
ತಿಳಿಯಲಿದು ಕಡೆಗಲಹವೆನುತಾ ।
ಕಲಿತಶರಸಂಧಾನದಲಿ ಕೈ ।
ಲುಳಿಯಲೆಚ್ಚನು ವೀರವೈಷ್ಣವನೂರ್ಮಿಳಾಪತಿಯ ॥೪೪॥

ಬಾಣವದಕಡಿದಬ್ಬರಿಸೆ ನಿ ।
ರ್ವಾಣತತಿ ಹೊಗಳಲು ಚತುರ್ಮುಖ ।
ಬಾಣದಲಿ ಕಡಿದಿಳುಹಿದನು ಶರನನು ನಿಶಾಚರನ ।
ಪ್ರಾಣತೊಲಗದಮುನ್ನ ಜಿಹ್ವೆ ।
ತ್ರಾಣದಲಿ ಹರಿ ವಿಷ್ಣು ಲಕ್ಷ್ಮೀ ।
ಪ್ರಾಣನಾಥಯೆನುತ್ತ ಶಿರವಡರಿತು ನಭಸ್ಥಳಕೆ ॥೪೫॥

ಅಡರೆ ಮಸ್ತಕನಭವ ಹರಿಪವ ।
ಕಡರಿತಾತ್ಮಜ್ಯೋತಿಗೇ ಬೆಳ ।
ಗಿಡುತಲುಚ್ಚಳಿಸಿದುದು ರವಿಮಂಡಲದ ಮಧ್ಯದಲಿ ।
ಝುಡಿವಪರಮಾನಂದರಸದು ।
ಗ್ಗಡದಲೇ ಬೊಮ್ಮಾದಿಗಳು ಬೆರ ।
ಗಿಡೆ ಬಹುಶ್ರುತಿ ಹಾರವಿಸೆ ಸನಕಾದಿಗಳು ನಲಿಯೆ ॥೪೬॥

ಮಿಸುಪಮಣಿಮಯಮಂಡಲವ ಥಾ ।
ಳಿಸುವ ಕದಪಿನ ಮುಗುಳುನಗೆಲಂ ।
ಬಿಸಿದವದನವ ವೀರರಸದಭಿನವದ ಲೋಚನದ ।
ಅಸುರಪತಿ ಲಂಕೇಶ್ವರನ ವೊಗ ।
ರಸದಶಿರಿಕೆಲಶಿಡಿವವೊಲ್ತಲೆ ।
ವಿಶಿಖಮುಖದಲಿ ಕೆಡದುದಿಳೆಗತಿಕಾಯರಕ್ಕಸನ ॥೪೭॥

ಹೊರಳಿದನು ಬಳಿಕವನ ಸಾರಥಿ ।
ಸುರಿವ ಕಂಬನಿಗಳಲಿ ಮಡಿದನು ।
ಬೆರಳಳಶೃಜಲಂಗಳನು ಲಂಕೇಶನೆರಡನೆಯ ॥
ಹರಿಪರಾಯಣನಸ್ತ್ರವಿಃಸಿದನೆ ।
ಹರಮಹಾದೇವೆನುತ ಡುಗುಡದ ।
ಲರಿಯಮನು ಹಮ್ಮೈಸಿಬಿದ್ದನು ಪಡುವಣಬುಧಿಯಲಿ ॥೪೮॥

ಅತಿಕಾಯನು ತನ್ನ ತಂದೆಗೆ ಅನೇಕಬಗೆಯಾಗಿ ಸದುಪದೇಶ ಮಾಡಿದರೂ, ರಾವಣನು ತನ್ನ ಛಲವನ್ನೇ ಸಾಧಿಸ ಹತ್ತಿದ್ದರಿಂದ ಮತ್ತು ಮಗನಾದ ತನಗೆ ರಾಮನ ಭಟರೆದುರಿಗೆ ನಿಂತು ಕಾದಾಡಲಿಕ್ಕೆ ವೀಳೆಯವ ಕೊಡಲು ಇಚ್ಛಿಸಿದ್ದರಿಂದ, ತಂದೆಯ ಪ್ರಾರ್ಥನೆಗನುಸರಿಸಿ ನಿಸ್ಪೃಹಭಾವದಿಂದ ಯಾವ ಅಭಿಲಾಷೆಯನ್ನು ಮನದಲ್ಲಿ ಹಿಡಿಯದೆ ಯುದ್ಧಮಾಡಿ, ಮುಕ್ತಿ ವನಿತೆಯನ್ನು ಕೂಡಬೇಕೆಂದು ತನ್ನ ಸೈನಿಕರಿಗೂ ಇದರಂತೆ ಹುರುದುಂಬಿಸಿ, ಅವರನ್ನು ಕೂಡ ತನ್ನಂತೆಮಾಡಿ ಯದ್ಧದಲ್ಲಿ ವೈರಿಗಳಕಡೆಯಿಂದ ಶಾಬಾಸ್ ಎಂದು ಹೊಗಳಿಸಿಕೊಂಡು, ಭಕ್ತನು ತನ್ನ ಇಷ್ಟದೇವತೆಯೊಡನೆ ಕಾದಾಡು ವಂತೆ ಕಾದಾಡಿ ಮಡಿದು ವೇದಾಂತಿಗಳಿಗೆ ದೊರೆಯುವ ಮುಕ್ತಿಯನ್ನು ಸಂಪಾ ದಿಸಿದನು.

ಯುದ್ಧದಭರದಲ್ಲಿ ಶತ್ರುಗಳಿಂದ ಜರ್ಜಿತರಾದ ಭಟರಿಗೆ ನೆಪೋಲಿ ಯನನಂತೆ ತನ್ನರಾಜ್ಯದಸ್ವಾತಂತ್ರ್ಯವನ್ನು ಮುಂದುಮಾಡಿ ಅವರಿಗೊದಗತಕ್ಕ ಭಾವೀಕೀರ್ತಿಯನ್ನು ಕುರಿತು ರಣದಲ್ಲಿ ಸೈನಿಕರನ್ನು ಯುದ್ಧಕ್ಕೆ ಹುರುಂಬಿಸಿದ ಉದಾಹರಣೆಯು:— ಮತ್ತು ತೈಮೂರಲಂಗನಂತೆ ಕ್ಷಾತ್ರ ಯೋದ್ಧರ ಹೊಡತಕ್ಕೆ ನಿಲ್ಲದೆ ಹಿಮ್ಮೆಟ್ಟಿದ ಸೈನ್ಯವನ್ನುದ್ದೇಶಿಸಿ—ನೀವು ಈ ಯುದ್ಧ ದಲ್ಲಿ ಜಯಶಾಲಿಗಳಾದಲ್ಲಿ ಹಿಂದು ರಾಜರ ವಿಪುಲ ಸಂಪತ್ತು ನಿಮ್ಮದಾಗು ವದು. ಅವರ ಸ್ತ್ರೀಯರು ನಿಮ್ಮರಾಣಿಯರಾಗುವರು—ಎಂದು ಮೊದಲಾಗಿ ಆಶೆದೋರಿಸಿ ಕಾಳಗಕ್ಕೆ ಅವರನ್ನು ಅಣಿಮಾಡಿ ಜಯಪತಾಕೆಯನ್ನು

ನಿಲ್ಲಿಸಿದ ತ್ರೈಮೂರಲಂಗನ ಉದಾಹರಣೆಯು-ಇತಿಹಾಸದಿಂದ ನಮಗೆ ಗೊತ್ತಾಗುತ್ತಿದೆ. ಆದರೆ ಅತಿಕಾಯನಂಥ ಸೇನಾನಾಯಕನು ಭಕ್ತಿಯುದ್ಧವನ್ನು ತನ್ನ ದೇವನೊಡನೆಸಗಿದ ಉದಾಹರಣೆಯು ಜಗತ್ತಿನಲ್ಲಿ ದುರ್ಲಭವಾಗಿದೆ. ಸದ್ಯದ ಸ್ಥಿತಿಯಲ್ಲಿ ಹಿಂದು ಜನರ ಸ್ವಾತಂತ್ರ್ಯ ಲಾಭಕ್ಕಾಗಿ ಅತಿಕಾಯರಂಥ ವೀರಸೇನಾಪತಿಗಳೂ ಅವನ ಭಟರಂಥ ನಿಸ್ವಾರ್ಥ ರಣಗಲಿಗಳೂ ಬೇಕಾಗಿರುವರು.

ಈಗಿನ ಪ್ರಪಂಚದಲ್ಲಿ ರಾಜ್ಯಕೋಶಗಳನ್ನು ಬೆಳಸಿ ಅದಕ್ಕಾಗಿ ಎಲ್ಲ ತರದ ಕಪಟೋಪಾಯಗಳನ್ನೂ ಕ್ರೂರ ಸಾಧನೆಗಳನ್ನೂ ತಮಗೆ ದುರಾದವರ ಮೇಲೆ ಉಪಯೋಗಿಸುವುದೇ ಹೆಚ್ಚು. ಲೋಕನೆಮ್ಮದಿಯು (world peace) ಅಹಿಂಸೆ ಮತ್ತು ಸತ್ಯ ವ್ರತಾಚರಣೆಯಿಂದ ಲಭಿಸುವದೆಂದು, ಕೈ ಎತ್ತಿ ಹೇಳುವ ಮಹಾತ್ಮಾ ಗಾಂಧಿಜಿಯವರ ಯುಕ್ತಿಯು ಅಂತ್ಯದಲ್ಲಿ ಜಯಶಾಲಿಯಾಗುವದು. ಮೊದಮೊದಲು ಲೋಕಕಂಟಕರ ಹೊಡತಕ್ಕೆ ಅನೇಕ ವೀರರು ಆಹುತಿಯಾಗುವರು. ರಾಕ್ಷಸೀ ಹೃದಯರ ಮುಂದೆ ನೀತಿಯು ಸಾಗದು. ಧರ್ಮವು ನಡಿಯದು. ಸೇರಿಗೆ ಸವ್ವಾಸೇರು ಆದರೇನೇ ಅವರು ಬಗ್ಗುವರು. ಆದರೆ ತಾವು ಸೋತೆವಲ್ಲಾ ಎಂಬ ಕುನಸುಅವರಲ್ಲುಳಿದು, ಪುನಃ ಅವರಲ್ಲಿ ಯುದ್ಧ ಮಾಡಿ ಜಯಗಳಿಸಬೇಕೆಂಬ ವಿರೋಧ ಭಾವಾಂಕುರವು ಮೊಳೆತು, ಅವರನ್ನು ಸುಮ್ಮನೆ ಕೂಡ್ರಿಸಲಾರದು. ಅಹಿಂಸಾತತ್ವದಫಲವು ಶತೃಗಳಲ್ಲಿ ದಯೆಯನ್ನು ಕರುಣಾಭಾವವನ್ನು ಹುಟ್ಟಿಸದಿರದು.

ಅತಿಕಾಯನ ರಣಬೋಧೆಯು ಅಹಿಂಸಾತತ್ವಕ್ಕಿಂತಲೂ ತೀರ ಬೇರೆಯಾಗಿರುವದು. ಯಾವುದನ್ನು ಆರಿಸಿಕೊಳ್ಳತಕ್ಕದ್ದೆಂಬುದನ್ನು ವಾಚಕರೇ ನಿರ್ಧರಿಸಿಕೊಳ್ಳತಕ್ಕದ್ದು. "ಹರಿಯು ಯುಗಯುಗದಲ್ಲವತರಿಸಿ ಜಗಕೆಕಂಟಕರಾದವರನ್ನು ತರಿಸುವನು ಕೊಲುವನು ಇದು ವೇದ ಮಾರ್ಗಕಣಾ" ಎಂದು ಮುಂದಿನ ಪಾಠದಲ್ಲಿ ಮಂಡೋದರಿಯು ರಾವಣನಿಗೆ ಹೇಳುವಳು. ಈ ಮಾತನ್ನು ಕೂಡ ವಾಚಕರು ಲಕ್ಷ್ಯದಲ್ಲಿತಂದು, ಸಮಯಕ್ಕೆ ತಕ್ಕ ಉಪಾಯವನ್ನು ಕೈಕೊಳ್ಳಬೇಕು.

# ೧೦ನೆಯ ಪಾಠ

## ರಾಮನ ಮಾಟದಶಿರವೂ ಸೀತೆಯ ಶೋಕವೂ

[ಹೀಗೆತಾಯಿಯ ಬುದ್ಧೀಮಾತನ್ನೂ ಮಗನ ಸದುಪದೇಶವನ್ನೂ ಧಿಕ್ಕರಿಸಿ ಲಂಕೆಯಲ್ಲಿರುವ ಪ್ರಖ್ಯಾತ ಸಿಲ್ಪಿಗನಾದ ವಿದ್ಯುಜ್ಜಿಹ್ವನನ್ನು ಕರಿಸಿ ಆತನಿಂದ ಒಂದು ರಾಮನಂಥ ಶಿರವನ್ನು ರಚಿಸಹೇಳಿ ಆ ಶಿರವನ್ನು ಮಧ್ಯರಾತ್ರಿಯಲ್ಲಿ ಸೀತೆಯಮುಂದೆ ಚಲ್ಲುವಂತೆ ತನ್ನ ಪರಿಚಾರಕರಿಗೆ ರಾವಣನು ಆಜ್ಞೆಮಾಡಿದನು. ಅದರಂತೆ. ಅವರು ಹೋಗಿ ರಾಮನ ಮುಖವನ್ನು ಸೀತೆಯಮುಂದಿಟ್ಟಬಳಿಕ, ರಾವಣನು ಹೋಗಿ ಇಗೋ-ನಿನ್ನ ಗಂಡನು ಯುದ್ಧ-ದಲ್ಲಿಮಡಿದನು, ಈ ಶಿರದಿಂದ ನೆತ್ತರುಗಿಯುತ್ತದೆ ನೋಡು, ಇದು ರಾಮನ ಖಡ್ಗ, ಇದು ಅವನ ಕವಚ, ಇದು ಅವನ ಧನಸ್ಸು", ನೋಡೆಂದು ಸೀತೆಗೆ ತಿಳಿಸಲಾಗಿ ಸೀತೆಯು ಆ ಮುಖಮಂಡಲವಂಕಂಡು ರಾಮನೆಂದುನಂಬಿ ಹೌಹಾರಿ ಮೂರ್ಛಿತಳಾಗಿ ಭೂಮಿಯಮೇಲೆ ಬೀಳುವಳು. ಆ ಶಿರವನ್ನು ಕೈಯಲ್ಲಿ ತಕ್ಕೊಂಡು]

ನೊಸಲ ನೊಸಲಿಂದೊರಿಸಿವಳು ಚುಂ ।
ಬಿಸಿದಳುಭಯಕದಪುಗಳ ದಿ ।
ಟ್ಟಿಸಿದಳೊಲದಳು ಮುದ್ದುಗೈದಳು ಲಲ್ಲೆವಾತಿನಲಿ ॥
ಒಸದು ಕೈಮುಂಡಾಡುತಾಲಿಂ ॥
ಗಿಸಿದಳನುರಾಗಪ್ರಸಂಚದ ।
ಕೊಸರಿಕೆಯ ಕಳವಳದ ಮೈಮರವೆಯಲಿ ಭೂಜಾತೆ ॥೧॥

ಆಗದಿರನೆನ್ನರಸನೆಂದಳು ।
ರಾಗಸಮರಸ ಭರಿತಮನ್ಮಥ ।
ನಾಗದಿರ ನೆನ್ನಯ ಮನೋವಲ್ಲಭ ಮಹೀರಮಣ ॥

ಆಗದಿರನೆಲೆಸರಮೆ ತನಗಿನಿ ।
ತಾಗಲಿದ್ದುದೆ ತ್ರಿಜಟೆಕೇಳ್ ।
ತಾಗಿತೀತನಗಕಟ ದುಷ್ಕೃತವೆಂದಳಂಬುಜಾಕ್ಷಿ ॥೨॥

ಹರಿವುತಜೆ ಯರಸಿನದಶಿರಿಸೀ ।
ವರಸುತದೆ ಸೀಮಂತದೊಳು ಹಂ ।
ಕರಿಸುತಿದೆ ಕಾಡಿಗೆಯ ಗಾಡಿನತನದ ಸೌಭಾಗ್ಯ ॥
ಮುರಿವುತಿದೆ ಮೂಗುತಿಯ ಬೆಳಗೋ ।
ಸರಿಸುತಿದೆ ಮುತ್ತೈದೆ ತನವೆಲೆ ।
ಸರಮೆ ಕಳುಹೌ ಬೇಗಪತಿಯೆಡೆಗೆಂದಳಾಸೀತೆ ॥೩॥

ಜೀವವನು ಹಿಡಿದಿರ್ದೆನಾರಾ ।
ಜೀವನೇತ್ರನ ನೆರವಭರದಲಿ ।
ಜೀವವಿದು ತಾನಿದ್ದುಫಲವೇನೀಧರಿತ್ರಿಯಲಿ ॥
ಜೀವವಿದ ನೆಲೆಸರಮೆ ಕೇಳ್ಮ ।
ಜ್ಜೀವಿತೇಶನ ಬಳಿಯಬಿಡುವೆನು ।
ಸಾವುಪಾಯವಹೇಳು ತನಗೆನುತಳಲಿದಳು ಸೀತೆ ॥೪॥

ತ್ರಿಜಟೆ— ಬಿಸುಡು ಬಿಸುಡೆಲೆ ದೇವಿ ಶಿರವಿದು ।
ವಸುಮತೀಶನದಲ್ಲ ಮುಟ್ಟದಿ ।
ರಸುರಕೃತ್ಯದ ಕೃತಕವಿದು ಬಿಸುಡೆನುತ ಹರಿತಂದು ॥
ಶಶಿಮುಖಿಯ ಶಿರಿಕರದ ಶಿರವನು ।
ಬಿಸುಡಿಸಿಕೆದರಿದಳಕಪಂಕ್ತಿಯ ।
ಪಸರಿಕೆಯನೇವರಿಸಿ ನಿಲಿಸಿದರಳಲನವನಿಜೆಯ ॥೫॥

ಈ ಪ್ರಕಾರ ಸರಮೆ ತ್ರಿಜಟೆಯರು ಇದು ರಾಕ್ಷಸರ ಮಾಯಾ ರಚನೆಯು, ಇದು ನಿಜವಾದ ಶಿರವಲ್ಲೆಂದು ಹೇಳಿ ಜಾನಕಿಯನ್ನು ಶೋಕದಿಂದ ಮುಕ್ತಮಾಡಿದರು.

ಇಂದ್ರಜಿತುವು ಬಹು ಶೌರ್ಯದಿಂದ ಶತೃಗಳೊಡನೆಕಾದಿ ರಣದಲ್ಲಿ ಮರಣಹೊಂದಿದಬಳಿಕ, ಮಂಡೋದರಿಯು ತನ್ನ ಪತಿಯೆಡೆಗೆ ಬಂದು ಕೆಳಗಿನಂತೆ ತಿಳಿಹೇಳುವಳು.

ಮಂಡೋದರಿ:- ಮರುಗಲೇಕಿನ್ನರಸ ಕೇಳರಿ ।
ದರಿದುಪರವಧುವಿನಲಿಪಾತಕ ।
ಕುರಿಸಿಮಾರಿಯ ಕರದುಕೊಂಡಾ ಬಳಿಕವಮಾತೇನು ॥
ಅರಿದುಮೊದಲಲಿ ಮಾವಹೇಳಿದ ।
ತೆರನತೋರದೆ ತಮ್ಮನುಚಿತವ ।
ನರಿಯದಾದ್ಯೈಕಾಳಗವಮಾಡಿದೆ ನಿರರ್ಥವಲಿ ॥೬॥

ಅಕ್ಷಯದ ಫಲವೊಲಿವಡಂಭೋ ।
ಜಾಕ್ಷಿಯನುಬಿಡು ಮಗನಿವವಿರು ।
ಪಾಕ್ಷನೊಬ್ಬನೆಸಾಕುಕರಸು ವಿಭೀಷಣಾಸುರನ ॥
ರಕ್ಷಿಸಾ ಪಟ್ಟಣವನಾಕಮು ।
ಲಾಕ್ಷನತಿಕಾರಣಿಕನವ್ಮನು ।
ಪೇಕ್ಷಿಸನು ಬಳಿಕನಿತರಲಿಕೇಳೆಂದಳಾಕಾಂತೆ ॥೭॥

ರಾಮನೀಜಗದಯ್ಯನೆಂಬುದು ।
ಭೂಮಿಯಲಿತಾಸುಪ್ರಸಿದ್ಧವು ।
ಹಾಮಹೀಸುತೆ ಲಕ್ಷ್ಮಿಯೆಂಬುದು ಸಕಲಜನಜನಿತ ॥
ಆಮುಗಧ ತನುಜಾತನೊಭವ ।
ನಾಮಹಾಶೇಷನುಕಣಾರಿಪು ।
ಭೀಮಬಲಮರ್ಕಟರು ಸುರರೆಂದರಿಮನಸ್ಸಿನಲಿ ॥೮॥

ಆದರೀಹದನರಿದು ಮರೆಯೊಗು ।
ವುದೇಮಹಾಸುಪ್ರೌಢಿನೀಬದು ।
ಕಿದಡೆನೆರೆಯವೆ ಪುತ್ರಮಿತ್ರಕಳತ್ರಸಂದೋಹ ॥

ಹದುಳವಿರದೇ ನಿನ್ನ ಭಾಗ್ಯದ ।
ವಿದಿತವೈಭವಬೇಡಮೂರ್ಖರ ।
ಮದದ ಮುಂದಣಿಗರಸನಾಗದಿರೆಂದಳಾಕಾಂತೆ ॥೯॥

ಹರನಬಿಲ್ಲನು ಮುರಿದುಸೀತೆಯ ।
ವರಿಸಿದಂವೇನರಿಯಬಾರದೆ ।
ಧುರ ವಿಜಯಮಾರೀಚ ವೀರಸುಬಾಹುಯೆಂಬವರ ॥
ಹರಣ ಗೊಂಡಂದರಿಯಬಾರದೆ ।
ಖರವಿರೋಧ ತ್ರಿಶಿರದೂಷಣ ।
ರರಿದತಲೆಗಳಕಂಡು ಕೆಣಕುವುದುಚಿತವೇನಿನಗೆ ॥೧೦॥

ಜಗದರಕ್ಷಣೆಗಾಗಿ ಹರಿಯುಗ ।
ಯುಗದೊಳವತರಿಸುವನು ಕೊಲುವನು ।
ಜಗಕೆ ಕಂಟಕರಾದವರನಿದು ವೇದಮಾರ್ಗಕಣ ॥
ಮೊಗಸದಿರು ಮೂರ್ಖತೆಗೆಮಾರಿಯ ।
ಮೊಗಕೆನಿಲದಿರು ಮೂರುದಿವಸದ ।
ಹಗರಣಕೆಹರಿಸದಿರು ಘಟವನುಯೆಂದಳಾಕಾಂತೆ ॥೧೧॥

ರಾವಣ:— ಕೇಳು ಮಂಡೋದರಿವಿಚಾರಿಸಿ ।
ಖೂಳನನು ಮಾಡದೆನ್ನ ಜನ್ಮಗ ।
ಕೇಳನೊಲ್ಲದೆ ಬಂದೆನಾಜನ್ಮತ್ರಯಂಗಳಲಿ ॥
ಹೇಣಿಕೆಯಲ್ಲಿನ್ನೊಂದು ಜನ್ಮದ ।
ಪಾಳಿಯವುನಮಗುಂಟು ಕಳಿದಡೆ ।
ಮೇಲೆಜಗದೊಳಗುತ್ತಮದಜಯಜವಿಯರಾವೆಂದ ॥೧೨॥

ಬಲ್ಲೆನೀರಘುನಾಥಲಕ್ಷ್ಮೀ ।
ವಲ್ಲಭನು ತಾನೆಂಬುವದುನುತಾ ।
ಬಲ್ಲೆನವನಿಜೆ ಲಕ್ಷ್ಮಿಯಂಬುದನಾಹವಕೆನೆರೆದ ॥

ಭಲ್ಲುಕರು ಮರ್ಕಟರುಸುರರಿಂ ।
ದೆಲ್ಲವೇತಕೆ ಕೇಳುರಣಮುಖ ।
ದಲ್ಲಿರಾಮನಕೂಡುವುದು ಸಂಕಲ್ಪತನಗೆಂದ ||೧೩||

ಕಡೆಯ ಮಾತಿದು ನೀನುಬೇರಿಂ ।
ನೊಡಬಡಿಸಬೇಡೆಂದು ಹಿಂದಕೆ ।
ನಡದಕೆಲಸವಿದೆನ್ನ ಹಿಪ್ಪೆಯಮಾಡಿಹಿಂಡದಿರು ॥
ತಡೆಯಬೇಡಿನ್ನೇನು ತರುಣಿಯು ।
ಮುಡಿಯನುಗುರಲಿತಿದ್ದಕಂಣಲಿ ।
ಜಡಿವನೀರ್ಗಳನೊರಸಿನಂಬಿಸಿ ಕಳಿದನಾದಿನವ ||೧೪||

ಟಿಪ್ಪಣಿ:– ಮಾಯಿಕ ರಾಮನನ್ನು ನಿರ್ಮಿಸಿದ ರಾಕ್ಷಸರು ಈಗಿನ ವಿಜ್ಞಾನಶಾಸ್ತ್ರಗಳಿಗಿಂತ ಹಿಂದುಳಿದವರಲ್ಲ. ಅವರ ವಿಜ್ಞಾನ ಶಾಸ್ತ್ರಪ್ರಗತಿಯು ಬಹು ಶ್ಲ್ಯಾಘನೀಯವಾಗಿತ್ತು. ಈಸಂದರ್ಭದಲ್ಲಿ ಆಧುನಿಕಶಾಸ್ತ್ರಜ್ಞರದೊಂದು ಶೋಧವನ್ನು ಇಲ್ಲಿ ಇಂಗ್ರೆಜಿ ಭಾಷೆಯಲ್ಲಿದ್ದಂತೆ ಅವತರಿಸಿ ಇದೆ.

**From Sunday Times 19th February 1939.**

# ROBOT WITH HUMAN VOICE

## FOR THE WORLD FAIR

An electric device, which can imitate the human speech, has been invented by the engineers of the Bell Telephone Laboratory, United States. Called the Voder, (short for voice operation

demonstrator) it will be exhibited at the New York World Eair.

Unlike the telephone receiver or the loud speaker which only reproduces speech the Voder originates speech at the touch of an operator, synthesizing sounds to form words.

The engineers who built it, had found during their telephone researches that by means of electrical filters and other complicated gadgets, they could produce twenty-three basic sounds and that intelligible speech could be synthesized from various combinations of these sounds, controlled by a skilled operator, manipulating a key-board and foot pedal.

## Mimics and Imitates

The machine's possible sound combinations are so various that Voder can imitate the injections, overtones and shading of human action. By altering pitch it can change from a man's voice to a woman's or child's. It can mimic animal sounds, locomotive whistles, the noise of an airplane engine.

But Voder has one drawback. It cannot sound the letter "I" naturally; when the keys were manupulated for the word "Bell Telephone," it gave it as something like Behrw Tehwephone.)



## ೧೧ನೆಯ ಪಾಠ

## ಸುಪಾರ್ಶ್ವನ ರಣಬೋಧೆ

[ಯುದ್ಧದಲ್ಲಿ ಮಡಿದ ಇಂದ್ರಜಿತುವಿನ ದೇಹವನ್ನು ಮುಂದಿಟ್ಟುಕೊಂಡು ರಾವಣ ಮತ್ತು ಮಂಡೋದರಿಯು ಮಾಡಿದ ಪ್ರಳಾಪ]

ರಾವಣ— ಸಿರಿಯದೇಕಿನ್ನೀ ಜಗತ್ರಯ ।
ದರಸುತನವಿನ್ನೇಕೆಕಾಮಿನಿ ।
ಯರಕಟಾಕ್ಷ ಕಳಾಪಕೇಳೀವ್ಯಸನವಿನ್ನೇಕೆ ॥
ತರುಣಕೇಳ್ ನೀನಲ್ಲದೇಕೀ ।
ಹರಣವೆಲೆ ಸುಕುಮಾರನುಡಿಯೈ ।
ಕಿರಣವಿಲ್ಲಶಶಿಯವೋಲು ತಾನಾದನೇಯೆಂದ ॥೧॥

,, ಹೇಳುಬದ್ಧಿಯ ನಮಗೆ ಮುಂದಕೆ ।
ಬಾಳಲೋ ಬೀಳಲೋಮಹಾಲಯ ।
ಬಾಲಕಿಯ ಬಲುಜವ್ವನದ ನೆಲೆಮೊಲೆಯುಪ್ಪಿನಲಿ ॥
ಕಾಳಕವಿದುದು ಬೆನ್ನಬೆಳಕಿಗೆ ।
ಕೇಳಿದೈಯೆಲೆಕಂದ ತನ್ನಯ ।
ನಾಲಿಗೆಗೆಮುಳ್ಳುರಿದುದುತ್ತರವಾವುದೆನಗೆಂದ ॥೨॥

,, ರತಿಕಲಾಸುಪ್ರೌಢಿಯಲ್ಲದ ।
ನತಿಯಸೊಬಗಿದ್ದೇನು ಫಲಸಂ ।
ನುತಗುಣಾಧಿಕನಲ್ಲದವನಾಕಾರ್ಯವೇನುಫಲ ॥
ನುತರಸಾಲಂಕಾರವಿಲ್ಲದ ।
ಕೃತಿಯ ಸೊಬಗಿದ್ದೇನು ಫಲನಿಜ ।
ಸುತವಿಹೀನನಬದುಕುಲೋಕದೊಳೇನು ಫಲವೆಂದ ॥೩॥

ನಾನಭಾಗ್ಯನುಕಂದನಿನ್ನಿಂ ।
ದೇನುಕೊರತೆ ಮಹಾಹವದೊಳುರೆ ।
ಹಾನಿಹೊದ್ದದೆ ಹಗೆಯ ಜಯಸಿದೆಪದ್ಮಜಾಸ್ತ್ರದಲಿ ॥
ಆನಿಸಿದೆಸಂವರ್ತಮೃತ್ಯುವಿ ।
ನಾನನಕೆ ಬಳಿಕೊಮ್ಮಿನಲಿಚತು
ರಾನನಾಸ್ತ್ರದೊಳಲ್ಪಪುಣ್ಯರು-ನಾವಲೇಯೆಂದು ॥೪॥

ಬೇಡನಾಗದೆ ರೋಮದಲಿಖಯ ।
ಖೊಡಿಯಲ್ಲದೆ ಮಗನೆಖಾಡಾ ।
ಖಾಡಿಯಲಿನೆರೆಕಾದಿ ಕೊಂದೆಯಲಾ ಮಹಾಬಲರ ॥
ಆಡನಾಲಿಗೆ ಯಿಲ್ಲವಿಷಯದ ।
ಲಾಡಿಮಕ್ಕಳಮರಿಗಳನು ಹೋ ।
ಗಾಡಿದನು ಖಳನೆನ್ನದಿರರಿನ್ನೇನುಗತಿಯೆಂದ ॥೫॥

ಮಂಡೋದರಿ– ಕೇಳಿಬಂದಳು ಬಳಿಕ ಸೊಸೆಯರ ।
ಮೇಳದಲಿ ಮೊರೆಯಿಡುತವದನವ ।
ಸೂಳವಿಸಿಕೊಳುತ ಸುರರಾಯನರಾಣಿ ಮಗನೆಡೆಗೆ ॥
ಬಾಲಹಾಬರ್ಶಿರ್ಮುಖರ ಹೃ ।
ಸ್ಥೂಲಹರಣನ ಭಾನುನೀರತಿ ।
ಲೋಲಹಾಹಾ ಕಂದಹಾಯೆಂದೊರಗಿದಳು ನೆಲಕೆ ॥೬॥

ಎನ್ನ ಸೊಬಗಿನ ನೋಟದುತ್ತಮು ।
ಕನ್ನಡಿಯನೊಡೆಬಡಿದರೋಹಾ ।
ಯನ್ನ ಚಿಂತಾಮಣಿಯಕದ್ದರೊ ಕಾಣುತಕಟಕಟ ॥
ಎನ್ನ ಭಾಗ್ಯದ ನಿಧಿಗೆಸವದರೊ ।
ಕನ್ನವನು ಮೊರೆಯಿಡುವಮಾತಸು ।
ಮನ್ನಿಸುವರಿಲ್ಲವೊ ವಿಚಾರದೊಳೆಂದಳಾಕಾಂತೆ ॥೭॥

ಆಸೆಗೊಡುವವರಿಲ್ಲದಕಟಾಪರ ।
ದೇಶಿಗಿತಿ ನಾನಾದೆನೇನೆರೆ ।
ದೋಷವಿಲ್ಲವೆನಿಮಗೆ ಕಂದನಕೊಂದವರುನೀವೆ ॥
ಲೇಸುಮಾಡಿದಿವಾಳಿಗಿತ್ತಾ ।
ದೇಶವನು ನೀವ್‌ಪಾಲಿಸಲು ।
ಬೇಕೈಸಲೇಯೆಂದಬಲೆಮೊರೆಯಿಟ್ಟಳು ಸಭಾವಳಿಗೆ ॥೮॥

ಕಳುಹಿಬಂದಿರೆಮಗನಹಗೆವನ ।
ಕೊಲೆಗೆಗುರಿಮಾಡಿದಿರೆ ಬವರಕೆ ।
ಬಲಿಯೆಕೊಟ್ಟಿರೆ ಬಾಯಿಗಡಸಿದರೇಲಯಾನೆನನ ॥
ಚೆಲುವಚನ್ನಿಗಚದುರನಲಿನೀವ್ ।
ಛಲವಮೆರದಿರೆ ಕೇಡುತನಗೊ ।
ಬ್ಬಳಿಗೆ ಬಂದುದಲಾಯೆನುತ ಬಾಯ್ಬಿಟ್ಟಳಾಕಾಂತೆ ॥೯॥

ಅರಿದಶಿರವನು ತೆಗೆದುಮುಂಡದ ।
ಕೊರಳಿನಲಿಸಸಿನಿರಿಸಿಮುದ್ದಿಸಿ ।
ಮರಳಿಚೈಮುಂಡಾಡಿದಿಟ್ಟಿಸಿ ಲಲ್ಲವಾತಿನಲಿ ॥
ಕರಕರದಡೋಯೆನ್ನೈಯಲೆ ।
ತರುಣ ತಾಯಿತಾನಲ್ಲವೇತಾ ।
ಕರಗವೇಕರಣಗಳು ತನ್ನಾಲಿಯೆಂದಳಾಕಾಂತೆ ॥೧೦॥

ಮೃತ್ಯುವಾದಳೆ ಮಗನಸೋದರ ।
ದತ್ತೆತಮ್ಮಣ್ಣನನು ಬೊಧಿಸಿ ।
ಕಿತ್ತುಬಿಸುಟಳೆಬೇರತನ್ನಯಪುತ್ರಸಂತತಿಯ ॥
ಹೆತ್ತೊಡಲು ಹಾಳಾಯ್ತು ಕಂಡಿರೆ ।
ಯತ್ತಿಸಲಹಿದ ತೋಳುನೆರೆಮುರಿ ।
ಯಿತ್ತುಕಂಡಿರೆಯೆನುತಕೊರಳಿಗೆ ಹಾಯ್ದಳಬಲೆಯರ ॥೧೧॥

ತಲೆಯ ತಕ್ಕಿಸಿಕೊಂಡುಮೇಲುದ ।
ಕೆಲಕಡೆಗೆ ಮರೆಮಾಡಿಮುದ್ದಿಸಿ ।
ಮೊರೆಗೊಳಿಸಿಕೂಗಿರಿದು ಮಲಗೆಲೆಕಂದಮಲಗೆನುತ ॥
ನೆಲನಮೇಲಿಳುಹಿದಳು ಕರದಳು ।
ಕೆಳದಿಯರ ಜೋಗುಣಕೆದಶಶಿರ ।
ನೊಳಗುತಾಪಿಸಿ ಕೊಸರಿದಳು ಕರದಳುನಂದನನಗುಣಗಣವ ॥೧೨॥

ಕೆಲಕೆಸಾರ್ದರು ಕಾಮಿನಿಯಕಾ ।
ವಲಿನಕಾಂತೆಯರಂಜಿಕೆಯಲುರೆ ।
ಚಲಿಸದವೊಲೀಕ್ಷಿಸಿದಳಬಲೆಕಟಾಕ್ಷದಲಿಖಳನ ॥
ಕೊಲಲು ಬಂದನಲಾ ಯೆನುತತಳ ।
ವೆಳಗಿನಲಿತಲೆ ಮುಸುಕಿನಲಿರಘು ।
ಕುಲಲಲಾಮನ ರಾಮರಾಮೆನುತಿರ್ದಳಂಬುಜಾಕ್ಷಿ ॥೧೩॥

ಸತಿಯಕಾಣುತ ಖಂಡೆಯವನುಗಿ ।
ದತಿಮುಸದರಕ್ಕಸನು ಲಲನಾ ।
ಹತಿಗೊಡಂಬಟ್ಟಿರಗುವನಿತರೊಳವನಮಂತ್ರಿಗಳು ॥
ಮತವಿದಲ್ಲೆನುತಡ್ಡವಿಸಿದೂ ।
ಹತಿಯ ಹಸ್ತವಹಿಡಿದುರಣ ।
ನಿಷ್ಕೃತಿಗೆ ರಂಜಕವಾವುದನಿತರೊಳೆಂದರವರಂದು ॥೧೪॥

ಇವಳ ದೆಸೆಯಿಂದ್ಯೆಸಲೇನ ।
ಮ್ಮವರು ನೆಮ್ಮಿದರಂತಕನನಿಜ ।
ಭವನವೀಧಿಯಲಿವಳತಲೆಯನು ಹೊಡೆದಬಳಿಕಿನಲಿ ॥
ಇವಳಬಿಡಿಸಲು ಬಂದಮ್ರುಗಮಾ ।
ನವಭಟಾಳಿಯ ಕೊಲುವೆನೆಂದವ ।
ತವಕಿಸಲು ತಗ್ಗೊತ್ತಿಬಳಿಕಸುಪಾರ್ಶ್ವನಿಂತೆಂದ ॥೧೫॥

ಸುಪಾರ್ಶ್ವ— ಕೀರ್ತಿಯಹುದರಿಭಟನ ಸಮರದೊ ।
ಛಾರ್ತದಲಿ ಕಾದಿದರೆ ಶೇರದ ।
ಧೂರ್ತಜನನಗದಿಹುದು ರಾವಣನಧಿಕಬಲನೆಂದು ॥
ವಾರ್ತೆಮುಂದಣಯುಗಗಳಲಿ ಸಂ ।
ಪೂರ್ತಿಯಾಗಿಹುದದರಿನೀನಪ ।
ಕೀರ್ತಿಯನು ಕೈವಿಡಿಯದಾಜಿಗೆ ಮನವಮಾಡೆಂದ ॥೧೬॥

ಲೋಕದೂಷಣವನ್ಯನಾರಿಯ ।
ಸೋಕುತಾನದು ಹಗೆಯಜಯಸದು ।
ಸೋಕಿದಬಲೆಗೆ ಮನವಮಾಡುವದು ತೋಜೆರಾಯರಿಗೆ ॥
ಸಾಕುತಿರುಗಿರಿ ಧ್ಯೆರ್ಯಧರ್ಮವ ।
ನೂಕುತೆಲೆ ಕಡುಖೂಳರಿರವಿಟನಾ ।
ಯಕನ ನೆಳಲಾಗದಿರಿ ನಡೆರಣಕೆ ನೀವೆಂದ ॥೧೭॥

ಚಾಚುನಮ್ಮನು ನಮ್ಮಜೀವವಿ ।
ರೋಚನದ ಮೇಲರಿಯಕೊರಳಿಗೆ ।
ಚಾಚುಚಟುಲಚಪೇಟಕದ ಚೂರಿಸುವಖಂಡೆಯವ ॥
ಆಚಟುಳಬಲ ನಿನ್ನಬಲುಹನು ।
ಚಾಚಿದರೆ ಬಳಿಕರಿದುಕೋಸಚ ।
ರಾಚರಾತ್ಮಕನೆಂದು ಸತ್ಯವಿದೆಂದು ನುಡಿಯೆಂದ ॥೧೮॥

ತಿರುಹಿದನು ಬಳಿಕಸುರರಾಯನ ।
ಹೊರದಕೋಪದ ತಾಪಶಿಖಿಯನು ।
ವರವಚೋವಿನ್ಯಾಸನಯವಿಸ್ತರದನೀತಿಯಲಿ ॥
ಪರಿಹರಿಸು ಕೈವಿಡಿದುತಂದಾ ।
ಭರಿತಸುತಶೋಕಾಗ್ನಿದಾಹದ ।
ತರುಣಿ ಮಂಡೊದರಿಯನುಪಚರಿಸಿದನು ವಿನಯದಲಿ ॥೧೯॥

ಅಳಲದಿರು ಕೇಳಬಲೆರಣದೊಳ ।
ಗಳಿದ ನಿನ್ನಕುಮಾರವರ್ಗವ ।
ನಿಲಿಸುವೆನು ನಿಸ್ಕಿದಿರಿನಲಿ ನಿರೇಜಭವಹರರ ॥
ಗಳಕೆ ಖಡ್ಗವನಿಕ್ಕಿಮುನ್ನಿನ ।
ಹಳವೆಗಿಮ್ಮಿಗಿಲಾಗಿ ಸುಖವ಼ಯ ।
ದೊಳಗೆ ನಿನ್ನಮನೋರಥವ ಮಾಡುವೆನುತಾನೆಂದ ॥೨೦॥

ಬಳಿಕವರನಾ ಸಚಿವಪತಿ ನಿಜ ।
ನಿಳಯುಕವರನು ಕಳುಹಿಕಡುಗ ।
ತ್ರಲೆಯಕೈದೀವಿಗೆಯ ಪಾಳೆಯದಪಸರದಲಿ ॥
ಒಳುಭಟರನೊಳುದಂತಿಗಳನ ।
ಗ್ಗಳಿಯ ತೇಜಿಯ ತಿಂಥಿಣಿಯ ತೇ ।
ರ್ಗಳನು ಮೇಳೈಸಿದನು ಕೂಡಿಕ್ಕಿದನುಂಕೈದುಗಳ ॥೨೧॥

ಒಡದು ಭಂಡಾರವನು ಮೊಗವೊಗ ।
ದಡಿಕಿದನು ಮನದಣಿಯೆ ಮಣಿಮಯ ।
ದೊಡಿಗೆಗಳ ನೀಡಿದನುಕರ್ಪುರಹಳುಕುಗಳಮೊಗಮ ॥
ಕುಡಿತೆಯಲಿ ಚಾಚಿದನುರಕ್ಕಸ ।
ಪಡೆಗೆ ನಾಳಿನಸಮರಮುಖದಲಿ ।
ಮಡಮುರಿದಡಿಹಪರಕೆಬಾಹಿರರಹಿರಿನೀವೆಂದ ॥೨೨॥

ವೀರಕಂಕಣ ಪಿಕ್ಕುವದುನಿಜ ।
ನಾರಿಯರ ಮಕ್ಕಳಗೃಹಾಲಂ ।
ಕಾರವನು ಬೀಳ್ಕೊಂಬುಮೊಂಪೇಚಿತ್ತಶುದ್ಧಿಯಲಿ ॥
ಸಾರಸಂಪದವಿತ್ತುಸ್ವಾಮಿಯ ।
ಕಾರಿಯಕೆ ಪ್ರಾಣವನುಕೊಡುವುವೆ ।
ದಾರಿಯಿದು ಸದ್ಗತಿಗೆಕಾರಣವೆಂದುಸಾರಿದನು ॥೨೩॥

ಮಣಿಯಲಾಗದು ವೈರಿಸುಭಟಾ ।
ಗ್ರಣಿಗಳಿದಿರಿನಲಿರಿದುಮೆರೆವುದು ।
ಹಣೆಗಳಲಿ ತೋರುವುದುಕಣ್ಗಳ ನಾಜಿರಂಗದಲಿ ॥
ಜಿಣುಗಿದಾಹವ ಸತಿಯಹಾರವ ।
ಕುಣಿಕೆಯನು ಸೆಕ್ಕುವದು ಸ್ವಾಮಿಯ ।
ರುಣವತಿದ್ದುವುವೆಂದು ವೀರಸುಪಾರ್ಶ್ವನಾರಿಸಿದ ॥೨೪॥

ಹೀಗೆಸುಪಾರ್ಶ್ವನು ರಣವೀರರನ್ನು ಯುದ್ಧಕ್ಕೆ ಹುರುದುಂಬಿಸಿ ಚತುರಂಗಬಲಸಹಿತವಾಗಿ ರಣವಾದ್ಯದಬ್ಬರದಲ್ಲಿ ಕಾಳಗಕ್ಕೆ ಅನುವಾಗಲು, ವಿರೋಧಿಪಕ್ಷದ ನೀಲ ಸುಗ್ರಿವ ಮೊದಲಾದವರು ಬಹು ಶೌರ್ಯದಿಂದ ರಕ್ಕಸರೊಡನೆ ಕಾದಾಡಿದರು. ರಕ್ಕಸರು ಕೋಡಗ ಮತ್ತು ಕರಡಿಗಳ ಪಡಿಯನ್ನು ಶಸ್ತ್ರಾಸ್ತ್ರಗಳಿಂದ ಕಡಿದು ಗಾಯಗೊಳಿಸಿದರು. ರಘುರಾಮನು ಸಮುದ್ರದ ತೆರೆಯಂತೆ ತನ್ನ ಸೈನ್ಯವನ್ನು ಮುತ್ತಲಬರುವ ಅಸುರರ ಸೈನ್ಯವನೋಡಿ ವಿಭೀಷಣನಿಗೆ ಇವರ ಸಂಗತಿಯಂ ವಿಚಾರಿಸಲು, ಅವನು ಶುಕ, ಸಾರಣ, ಶಾರ್ದೂಲ ಇವರ ಮೂವರ ಹಿಂದೆಸೆಯಲ್ಲಿ ತೋರುವ ಸುಪಾರ್ಶ್ವನೆಂಬವೀರ ಶಿರೋಮಣಿಯ ಬಳಿಯಲ್ಲಿ ಹದಿನೆಂಟು ನಿರ್ಬುದವೀರರಿರುವರು. ಇವರ ಕರಳು ಯುದ್ಧದಲ್ಲಿ ಕುಪ್ಪಳಿಸಿ ರಕ್ತದ ಮಡಕಂಡಿತು. ಅಸ್ಥಿಗಳ ಹೇರಾಶಿಯಾಯಿತು. ಇದಂಕಂಡು "ಏನು ವೀರರೊ, ರಕ್ಕಸರು ಸೊಂಡಿಲು ಹಂದುಬಿದ್ದ ಆನೆಗೆ ಸೊಂಡಿಲು ಹಚ್ಚುವರು. ಮಸ್ತಕಹೋದ ಅಶ್ವಕ್ಕೆ ಅದನ್ನು ಪುನಃ ಹಚ್ಚಿ

ಯುದ್ಧವಾಡುವರು" ಎಂದು ಅವರನ್ನು ಹೊಗಳುತ್ತ ಯುದ್ಧಮಾಡುತ್ತ ಮಾಡುತ್ತ ಒಮ್ಮಿಂದೊಮ್ಮೆ ಅಸುರನಾಯಕರು ಯುದ್ಧವಂನಿಲ್ಲಿಸಿ ರಘು ರಾಮುಂಗೆ ಶರಣುಹೋದರು. ಆಸಮಯದಲ್ಲಿ ರಾವಣನು ವಿದ್ಯುತ್ಕೇಶಿಯೆಂಬ ನಿಶಾಚರನನ್ನು ಅಸ್ತಮಾನಸಮಯಕ್ಕೆ ರಾಮನಂ ಕೊಲ್ಲಲೆಂದು ಮರೆಮಾಡಿ ಕಳಿಸಲು, ಈ ಮಾಯೆಯನ್ನು ಹನುಮಂತನು ಕಂಡು, ತನ್ನ ಕೈಯೊಳಗಿನ ಒಂದು ಹೆಮ್ಮರದ ಕೊನೆಯಿಂದ ಅವನ ಹೆಗಲಮೇಲೆ ಅಪ್ಪಳಿಸಲು, ಆ ನಿಶಾಚರನು ಪ್ರಾಣದಿಂದ ಮುಕ್ತನಾಗಿ ಭೂಮಿಯಮೇಲೆ ಧೊಪ್ಪನೆ ಬಿದ್ದನು. ರಕ್ಕಸರು ಪಶುಚಿಕಿತ್ಸೆಯಲ್ಲಿಯೂ ಮುಂದರಿದಿದ್ದರು.



## ೧೨ನೆಯ ಪಾಠ

## ಸೇವಾಧರ್ಮವನ್ನು ಕುರಿತು ಹನುಮನ ವಿಚಾರ

[ರಾವಣನ ಕೂಡ ಯುದ್ಧಮಾಡುವಾಗ ಅಂಗದನು ಯುದ್ಧದಲ್ಲಿ ಮಡಿಯುವನು. ಸಂಜೀವಿನಿಯ ಔಷಧ ತರಿಸಿ ಅವನನ್ನು ಬದುಕಿಸಿದ ಬಳಿಕ, ಹನುಮನು ರಾಮನೊಡನೆ ಸೇವಾಧರ್ಮವನ್ನು ಕುರಿತು ಕೆಳಗಿನಂತೆ ಹಾಡುವನು,]

ಅವಧರಿಸು ರಾಜೇಂದ್ರಲೋಕ ।
ವ್ಯವಹರಣೆಗಿದು ಸೇವೆಯೆಂಬುದು ।
ಭುವನದಲಿ ಕರಕಷ್ಟದೇವರಿಗೆಂದ ಮಾತಲ್ಲ ॥
ಜವನನಗೆಲಬಹುದಾಲಯಗ್ನಿಯ ।
ತವಿಸ ಬಹುದಾಪ್ರಳಯ ರುದ್ರನ ।
ಬವರಕಾನಲುಬಹುದು ಸೇವಿಸಬಾರದಕಟೆಂದ ॥೧॥

ಗರಳವನು ಕುಡಿದೀಕ್ಷಿಸಲುಬಹು ।
ಮರಿಯನಪ್ಪಲಿಬಹುದು ಮಾರಿಯ ।
ಸರಸವಾಡಲಿಬಹುದು ಚುಂಬಿಸಬಹುದು ಫಣಿಮುಖವ ॥
ಹರಿಯನಪ್ಪಲಿಬಹುದು ಸೀಳುವ ।
ಕರಗಸಕೆ ಕೊರಳನೊಡ್ಡಲಿಬಹುದು ॥
ಚ್ಚರಿಸಬಾರದು ಸೇವೆಯೆಂಬದನೆಂದನಾಹನುಮ ॥೨॥

ಮಾನಭಂಗವ ಮಾಡುವುದು ನೆರೆ ।
ಹೀನವೃತ್ತಿಯ ಬಳಸುವದುದುಂ ।
ಮಾನದಾಗೆಲವೆನಿಸುವದು ತನುವಿರಲು ಮೃತಮುಖದ ॥
ಜ್ಞಾನಗೊಳಿಸುವುದಿತರಜನಕಭಿ ।
ಮಾನಗೇಡುಗ ನೆನಿಸುವದು ರಘು ।
ಸೂನುಚಿತ್ತ್ಯೈಸರಸ ಸೇವೆಗಳೆಂದನಾ ಹನುಮ ॥೩॥

ಸೇವೆಸಾವಿನ ಸಂಗಡದಮನೆ ।
ಸೇವೆ ದುಷ್ಟಾಚಾರದಾಗರ ।
ಸೇವೆಸತ್ಯವನೊಕ್ತಿಯಾಳುವಸತ್ಯದಾಗರವು ॥
ಸೇವೆಯುವಮಾನಕ್ಕೆ ಚಾವಡಿ ।
ಸೇವೆಪಾಪವಪುಂಜವಿರುವದು ।
ಸೇವೆಯಿಂದತಿಕಷ್ಟವಿನ್ನೊಂದಿಲ್ಲ ರಘುನಾಥ ॥೪॥

ಸಾವುದೇಸುಖ ಸೇವೆಗಿಂದವೆ ।
ಜೀವವನು ಸಲಹುವದರಿಂದೆಸ ।
ವಾ ವಿಭಾಕರಕುಲಜನತಿಕರುಣದಲಿ ಕೈನೀಡಿ ॥
ಪಾವಮಾನಿಯ ಬರಶೆಳದು ಸಂ ।
ಭಾವನೋಕ್ತಿಗಳಿಂದ ಜಾಂಬವ ।
ದೇವಹೊಗಳಲು ತೆಗದುಬಿಗಿಯಪ್ಪಿದನು ಸ್ನೇಹದಲಿ ॥೫॥

ರಾಮ— ಮಗನೆನೀಸೇವಕನೆ ಸೇವೆಯ ।
ಸೊಗಸುಗೊಂಬವರಾವೆಮಾತಿದು ।
ನಿಗರನಿನಗಿಲ್ಲೆಮ್ಮಹೃದ್ಗತ ಮರುತನೀನೀಗ ॥
ಜಗದೊಳಗೆ ನಿನ್ನಿಂದಪೂಜ್ಯರು !
ಬಗೆಯಲುಂಟೇ ಕಂದಹೇಳೆಂ ।
ದಗಲದಾಮೋಹವನು ಮರಳಿಚಿ ತಂದನಾರಾಮ ॥೬॥



# ೧೩ನೆಯ ಪಾಠ

## (ಅ) ನೀತಿ ಸೂಚಕ ಪದ್ಯಗಳು

ದಶರಥ— ಮಕ್ಕಳಿಲ್ಲದ ಸಕಲಸಿರಿ ಶವ ।
ಕಿಕ್ಕಿದಖಿಳಾಭರಣವಿಭ್ರಮ ।
ಮಕ್ಕಳಿಲ್ಲದ ಸೊಬಗು ಪತಿಶೂನ್ಯಾಂಗನಾ ವಿಭವ ॥
ಮಕ್ಕಳಿಲ್ಲದ ನಾರಿಯರು ಯಾ ।
ತಕ್ಕೆಸಲುವರು ಗಡಮಹಾದೇ ।
ವಕ್ಕಟಾ ಕಡುಗೇಡಕೆಟ್ಟೆನೆ ಶಿವಶಿವಾಯೆಂದ ॥೧॥

,, ಏನುಗತಿ ನಿಜವಂಶವಂಧ್ಯಾ ।
ಮಾನಿನಿಗೆ ಪತಿಯಾವೆನೇಗತ ।
ಸೂನುವಿವನೆಂದೆನ್ನ ಹೊಗಿಸರು ಸ್ವರ್ಗವನು ಸುರರು ॥
ಏನುಮಾಡುವೆನೇನುದಿಕ್ಕೆನ ।
ಗೇನುಹದನೆಂದಳಲಿಬಳಲುವ ।
ಹೀನ ಧೈರ್ಯನನುಪಚರಿಸಲು ವಶಿಷ್ಠನೈತಂದ ॥೨॥

ಹೊರದೆನಕಟಾ ತನುವನಿದಸೂ ।
ಕರ ಶುನಕನವೊಲು ಕಾಮಾ ।
ತುರದಿಮಿಗೆಕಂಗಾಣದಾದೆನು ಸುಗತಿಸಂಪದಕೆ ॥
ಯರವಿಗನು ತಾನಾದೆನಿಹಪರ ।
ವೆರಡರಲಿ ಜೀವಾವನಾನಕೆ ।
ಹರಹಿಕೊಂಬನಲಾಕೃತಾಂತಕನೆನುತ ಶೋಕಿಸಿದ ॥೩॥

ಕೌಶಿಕಮುನಿಯು ತನ್ನ ಯಜ್ಞಕ್ಕೆ ರಾಕ್ಷಸರ ಹಾವಳಿಯು ಬಹಳವಾಗುತ್ತಿದೆ. ಅದರ ರಕ್ಷಣೆಗಾಗಿ ರಾಮನನ್ನು ತನ್ನ ಸಂಗಡ ಕಳಿಸು ಎಂದುಹೇಳಿ ಅವನಂ ಒಡಂಬಡಿಸಿ ಕರಕೊಂಡು ಬರುವದಾರಿಯಲ್ಲಿ ತಾಟಕಿ ಯೆಂಬರಕ್ಕಸಿಯು ಅವರನ್ನು ಬಾಧಿಸಹತ್ತಲು, ಕೌಶಿಕನು ಇವಳನ್ನು ಹೊಡೆದುಕೊಲ್ಲೆಂದು ಹೇಳಲು, ರಾಮನು ಸ್ತ್ರೀಯರಂ ಕೊಲ್ಲುವದು ಕ್ಷತ್ರಿಯರ ಧರ್ಮವಲ್ಲೆಂದು ಉತ್ತರ ಕೊಡಲು, ಅದಕ್ಕೆ ಮುನಿಪನು ಧರೆಗೆ ಕಂಟಕರಾದವರ್ಯಾರೇ ಇರಲಿ, ಅವರಂವಧಿಸುವದೇ ಪರಮಾರ್ಥ ಸಾಧನವೆಂದು ಹೇಳಿ ರಾಮನಿಂದ ತಾಟಕಿಯಂ ಕೊಲಿಸುವನು.

ರಾಮ— ಹೆಂಗಸಿವಳಿವಳಸುವ ಸುಚ್ಚುವ ।
ದಂಗವೇಕ್ಷತ್ರಿಯರಿಗೆಮ್ಮ ।
ಪತಂಗಕುಲದರಸುಗಳು ನಗದಿಹರೇ ಸುರೇಂದ್ರನಲಿ ॥
ಭಂಗಬಡಸದೆ ಬಿಡುವುದೇ ದಿಟ ಭಟ ।
ರಿಂಗೆ ಬೆಸಸದಿರೆನಿತನೆನೆಮುನಿ ।
ಪುಂಗವನು ನಸುನಗುತಲಾ ರಘುನಾಥಗಿಂತೆಂದ ॥೪॥

ಕೌಶಿಕಮುನಿ— ಎಲೆಕಕುಸ್ಥಜಕೇಳು ಲೋಕವ ।
ಹಿಳದಳಿದಳಿವಳಂದದಲಿ ಹಿಂದಣ ।
ಬಲಿಯತಂಗಿಬಳಿಕ್ಕದೂರಾಯ್ತುವಳಧೆಸೆಯಿಂದ ॥

ಧರಗೆ ಕಂಟಕರಾದವರಂ ಕೊಲ್ಲುವುದೇ ಸನ್ಮಾರ್ಗ

ಬಲಿವಿರೋಧಿಗೆ ಕೇಳಿದ್ದೈಕಡು ।
ಗಲಿಯಗಲಿದನು ಶಕ್ರನವಳನು ।
ಕೊಲೆಗೆ ಕೊಕ್ಕರಿಸಿದನು ಕಾಲಗ್ರೀವಮೃತ್ಯುವಿನ ॥೫॥

,, ಧರೆಗೆಕಂಟಕರಾದವರ ಸಂ ।
ಹರಿಸುವದೆನ್ನೃಪನೀತಿ ಸುಜನರ ।
ನಿರತಿಶಯ ರಕ್ಷಿಸುವದೇ ಕ್ಷತ್ರಿಯಧರ್ಮಕಣ ॥
ನಿರುತವಿದು ಪರಮಾರ್ಥದಲಿ ಸಂ ।
ಹರಿಸು ಸಂದೇಹವನು ಮನದೊಳ ।
ಗಿರಿಸದೀರಕ್ಕಸಿಯನೆಲೆ ರಘುನಾಥಕೇಳೆಂದ ॥೬॥

## ಮಾರೀಚ ಋಷಿಯು ರಾವಣನಿಗೆ ಮಾಡಿದ ಸದುಪದೇಶ

ಮಾರೀಚ— ಆತನೀಗೀತನು ಕಣಾಸ ।
ತ್ವಾತಿಶಯ ದುಬ್ಬರದಕೊಬ್ಬಿನ ।
ನೀತನಿದಿರಲಿ ಮೆರದಡೇನ್ಸೈ ಮಿತ್ರನಿದಿರಿನಲಿ ॥
ಧಾತುಧವಳಿಸಬಲ್ಲುದೇ ಖ ।
ದ್ಯೋತಕೀಟಕದಾಟವಿಕತನ ।
ಸೀತೆಯರಸನಸಲೆಸಗಬಲ್ಲುದೆ ಕಂದಕೇಳೆಂದ ॥೭॥

ಮುರಿಯದಿರು ಸುರಭೂಜವನು ನೀ ।
ನಿರಿಯಬೇಡಾ ಕಾಮಧೇನುವ ।
ನುರುಬದಿರುಕಾಮಿತದರತ್ನವನಕಟಕಡಲೊಳಗೆ ॥
ಉರುವ ಮುನಿಪೌಲಸ್ತ್ಯವಂಶದ ।
ಮೆರೆವ ಜವ್ವನ ಜರಣವನಿತೆಯ ।
ತುರುಬಬೋಳಿಸಬೇಡಕಟನೀನೆಂದ ॥೮॥

ಖಳರೊಳಗೆ ಸಜ್ಜನನು ಹಾಲಾ ।
ಹಲದೊಳಗೆ ಸುಧೆಕಾಮರಂಗಳ ।
ಹಳುವದಲಿ ಹರಿಚಂದನವು ಶಿಖಿಯೊಳಗೆ ಶೀತಳವು ॥
ಕಲುಗಳೊಳು ನಿಜಪರುಷ ಜನಿಸುವು ।
ದೆಣೆಗೆ ಚಿತ್ರವಲಾ ಯೆನುತಮ್ಮೈ ।
ಯ್ಯೊಲಹಿನಲಿ ನೋಡಿದನು ದೂರದೊಳಾವಿಭೀಷಣನ ॥೯॥

ಹರನಹಣೆಗಣ್ಣಿನ ಮಹಾನಲ ।
ದುರಿಯು ಹೊಯ್ಲಲಿಸಾಯಲಾರದೆ ।
ಪುರುಷತನವನು ಬಿಟ್ಟು ಮಂಡೋದರಿಯರೂಪಕವ ॥
ಧರಿಸಿದನೊ ಕಂದರ್ಪನೆನೆಸಿಂ ।
ಗರದಸಾರೋದಯದಸೊಬಗಿನ ।
ಸರಿಸಿಧಿಯ ಮೌಕ್ತಿಕದವೊಲು ಮೆರೆದಿರ್ದಳಾಕಾಂತೆ ॥೧೦॥

ಜನನಿಶಿಶುವನು ಸತ್ಕುಲೀನನು ।
ವಿನುತಸದ್ವರ್ತನೆಯ ಸತ್ಪುರು ।
ಷನುಸದಾಚಾರವನು ಸಜ್ಜನನಧಿಕಸದ್ಗುಣವ ॥
ಜನಪನೈಶ್ವರ್ಯವನು ಧರ್ಮ ।
ಜ್ಞನು ಯಶೋಲಭ್ಯವನು ಸಲಹುವನ ।
ನೆನಹಿನವೊಲಭಿಮಾನರಕ್ಷಣೆಸತಿಯಕಪಿಕಂಡ ॥೧೧॥

ಪರವಧೂವ್ಯಸನಿಗಳ ಭಂಗವು ।
ನರಕಭಾಜನವೆಂದು ನೆರೆಧಿ ।
ಕ್ಕರಿಸಿದಶಕಂಧರನ ನಗರಾಂಗನೆವಿರಾಗದಲಿ ॥
ಪರಮಪ್ರಾಯಶ್ಚಿತ್ತವಂಗೀ ।
ಕರಿಸಿಹೊಗಲುವ್ಯೋಗಿಸಿದನಿ ।
ರ್ಭರದ ನಿಡುಗಿಚ್ಚಿನವೊಲಿರ್ದುದಹನರಿಪುಪುರವು ॥೧೨॥

ಮುತ್ತು ನೀರಿನಲಾದ ಬಳಿಕದು ।
ಮತ್ತೆನೀರಹುದೇಸುವರ್ಣಕ ।
ವೆತ್ತಕಬ್ಬಿಣ ಮರಳಿಕಬ್ಬಿಣವಹುದೆರಸವಾಗಿ ॥
ಸತ್ತುಹುಟ್ಟುವ ಹುಟ್ಟಿಹೊಂದುವ ।
ಸುತ್ತುದೊಡಕಿನ ತೊಡಹನೊಲ್ಲದ ।
ಚಿತ್ತಶುದ್ಧಿಯ ಸುಭಟರೈತಹುದೆಂದನತಿಕಾಯ ॥೧೩॥

ಮರುಳತನ ನಿನಗುಂಟೆ ಹೇಳೈ ।
ವರವಿಭೀಷಣದೇವ, ಜನನಕೆ ।
ಮರಣ, ಸೌಖ್ಯಕೆ ದುಃಖವಿದೀಗಲನುಸಾರಿ ॥
ತರುಣತೆಗೆವಾರ್ಧಿಕವು ಮಹದೈ ।
ಶ್ವರ್ಯವಿಪದಾಶ್ರಯಕೆ ನೀನಿದ ।
ಕರುಹನಾಗರಿವಿಂಗೆನುತಸಂತೈಸಿದನುರಾಮು ॥೧೪॥

ಆರುನೀನಾವಾರು ನಮ್ಮರಿಯ ।
ನಾರಿಯೆತ್ತಲು ವಿಪಿನವೆತ್ತಕು ।
ಬೇರಸಹಭವನೆತ್ತಹೊಮ್ಮೃಗವೆತ್ತವಾನರರ ॥
ಸೇರುಪಡೆತಾನೆತ್ತದೈವ ।
ಪ್ರೇರಣೆಯದಲ್ಲದಿದು ಸಲ್ಲದುನಾ ।
ವಾರುವಾಡೂದಲ್ಲ ಬಂದುದಂಗೀಕರಣತಾನೆಂದ ॥೧೫॥

## (ಬ) ವಿಪ್ರರು ಕ್ಷಾತ್ರಧರ್ಮಕ್ಕೆ ಅನಧಿಕಾರಿಗಳು.

ಜನಕರಾಜನಿಂದ ಹೂಡಿದ ಸೀತಾಸ್ವಯಂವರದಲ್ಲಿ ರಾಮನು ಹರನ ಧನುಸ್ಸನ್ನು ಎತ್ತಿ ಸೀತೆಯಂ ವರಿಸಿ, ವಿವಾಹಕಾರ್ಯವಾದ ಬಳಿಕ ಜನಕನಅಪ್ಪಣೆಯಂ ಪಡೆದು, ರಾಮನು ಅಯೋಧ್ಯೆಗೆ ವೈಭವದಿಂದ ಬರುವದನ್ನು

ಕ್ಷತ್ರಿಯ ವಂಶಸಂಹಾರಕನಾದ ಪರಶುರಾಮನು (ಭಾರ್ಗವರಾಮನು) ಕಂಡು, ಕೋಪಾವಿಷ್ಟಮಾನಸನಾಗಿ ರಾಮನೊಡನೆ ಯುದ್ಧಮಾಡಲು ಬರುವನು. ಅವನು ಭೃಗುಮುನಿಯ ಮಗನಾದ್ದರಿಂದ ಬ್ರಾಹ್ಮಣನು ಯುದ್ಧಮಾಡುವದು ಅವನ ಧರ್ಮವಲ್ಲ. ವೇದಾಧ್ಯಯನ ಶಾಸ್ತ್ರಾಧ್ಯಯನವೇ ಅವನ ಮುಖ್ಯಕರ್ತವ್ಯ ಧರ್ಮವೆಂದು ರಾಮನು ತಿಳಿಹೇಳಿ ಅವನನ್ನು ಒಡಂಬಡಿಸಿ ಕಳಿಸುವನು.

ಬಳಿಕದಶರಥ ಸಾರ್ವಭೌಮನ ।
ದಳದ ಸಂಭ್ರಮದಬ್ಬರವ ।
ವಳುಕಿಸಿತು ಸುರನರ ಭುಜಂಗಮ ಭುವನವೀಧಿಗಳ ॥
ಇಳೆಯ ಪಾರ್ಥಿವರಧಟು ಕೊಡಲಿಯ ।
ಕೊಲೆಗಡಿಕಗದು ಸೊಗಸೆಸುಳಿದನು ।
ವಿಲಯರುದ್ರನ ಕುಪಿತರೌದ್ರಾವೇಷರೋಷದಲಿ ॥೧॥

ಕರಿಘಟಿಗಳುಪ್ಪರಿಸಿ ಜಗ್ಗನೆ ।
ಜರಿದುನಿಂದವು ಕುಣಿವಕುಮರೆಗ ।
ಖುರಕೆಕಬ್ಬಿಯ ಕುಸಿದುಕುಕ್ಕರಿಸಿದವು ಭೀತಿಯಲಿ ॥
ಕನಿಸಬಾಯಲಿ ಹಾಯ್ದುಬಳಲಿದ ।
ಕರದಕೈದುಗಳರಸುಗಳಬಾ ।
ಯ್ದೆರೆಯುವೇನೇನೆನಲು ಪರವಶರಾದರಲ್ಲಲ್ಲಿ ॥೨॥

ಉಲುಹುದೆಗದಿಂಗುವ ಸಮುದ್ರದ ।
ಸಲಿಲದೊಲಾಯ್ತುಖಿಳಸೇನಾ ।
ಜಲಧಿಕಾಣೆನು ಮಲೆವನುಹಿಮುರ ಮುನಿಯಮುಂಬಿನಲಿ ॥
ಕಳಚಿತರಸನಮನದ ಧೈರ್ಯಾ ।
ಚಲದ ಬೈಸಿಕೆ ಹದದನನದಕಂ ।
ಡಲಘುಭುಜಬಲರಾಮನಿಂದನು ಮುಂದೆಭಾರ್ಗವನ ॥೩॥

ರಾಮ:— ನಿಮಗಿದೇತಕೆ ಕ್ಷತ್ರಿಯರೊಳು ।
ಭ್ರಮಿತತನ ಭೂಭುಜರ ಭುಜವಿ ।
ಕ್ರಮದಪರಿಪಾಡುಗಳು ನಿವೇನಿಮ್ಮ ಚಿತ್ತದಲಿ ॥
ಸಮತೆಯಲಿ ಸುಮುಖದಲಿತಿಳಿದಾ ।
ಕ್ರಮಿಸದಿಹುದೇಸುಪ್ರೌಢಿಸಂ ।
ಭ್ರಮವುಸಾಕೀ ವೊಪ್ಪದಲಿ ಜಾರುವುದುಲೇಸೆಂದ ॥೪॥

,, ಕೆಲಕೆ ತೊಲಗುವದುಚಿತಹಿಂದಣ ।
ಬಲುಹದಂಡಿಗೆ ಹುಲುದೊರೆಗಳಲಿ ।
ಸಲವುದಲ್ಲದೆ ಸಲ್ಲದಿತ್ತಲು ಶೌರ್ಯನಿಮ್ಮಡಿಯು ॥
ತಿಳಿವಡವನೀಸುರರಿಗಿಂದ ।
ಗ್ಗಳರುಶೌರ್ಯದಲವನಿಪರುವೆ ।
ಗ್ಗಳರುವಿಪ್ರರು ವಿಧಿವಿಹಿತಕರ್ಮದಲಿನಿಮಗೆಂದ ॥೫॥

,, ಧ್ಯಾನ ಮೌನಸಮಾಧಿ ಶೌಚ ।
ಸ್ನಾನಜಪತಪನಿತ್ಯನಿಯಮ ।
ಜ್ಞಾನಸತ್ಕರ್ಮಪ್ರವಿಸ್ತರ ದೇವತಾಭಜನೆ ॥
ಮೌನಿಗಳಿಗಿದುಮಾರ್ಗ, ಶರಸಂ ।
ಧಾನಸಮಯೋಚಿತದಶೌರ್ಯವ ।
ನೂನಪ್ರಾರ್ಥಿವಕರ್ಮನಿಮಗಿದು ಯೋಗ್ಯವಲ್ಲೆಂದ ॥೬॥

,, ಸೆಣಸುವದು ಸುವ್ಯಾಕರಣಪರಿ ।
ಗಣಿತಶಾಸ್ತ್ರಜ್ಞರಲಿ ಸಮರದೊ ।
ಳಣಕಿಸುವದಸಮಾನರಲಿ ಸಂಗ್ರಾಮಸಲ್ಲದೆನೆ ॥
ಕುಣಿದವಾಕುಡಿಮೊಸೆಬಿಡದಿಂ ।
ಗಣವನುಗುಳಿದವಕ್ಷಿಕಲ್ಪದ ।
ಕಣುಗಿಡಿಯೆ ಕರ್ಕಶಕಪರ್ದಿಯಬಗೆಗೆಮನದಂದ ॥೭॥

ಭಾರ್ಗವರಾಮ:—ತರಣಿಯನುತುಸವೆಂದು ತುಂಡವ ।
ಲರಿವರಾಹುವತಾನೆ ತವಕಿಸಿ ।
ತರುಬಿನಿಲುವವೊಲಾಯ್ತುಲಾ ಕ್ಷತ್ರಿಯರು ತಾವುಗಡ ॥
ಧರಣಿಯಮರರುನಾವುಗಡಸಾ ।
ಗರವ ಸರಸಿಯು ಸೆಣಸುವಂತಾ ।
ಯ್ತರಿಯಬಹುದಿನ್ನೆನುತ ಕೊಡಲಿಯಜಡಿದನಾರಾಮ ॥೮॥

ಹಾಯಿತುರಿಹೊದರೆದ್ದು ಕೊಡಲಿಯ ।
ಬಾಯಧಾರೆಯಲಖಿಳಜಗವವಿ ।
ದೇಯೆನಲು ಸೀವರಿಸೆಶಿಖಿ ಮೊಗದುದುಮುರುತ್ಪಥವ ॥
ವಾಯುವರುಣ ಕುಬೇರಯಮವ ।
ಜ್ರಾಯುಧರು ಹವ್ಮ್ಯೈಸಿದರುಹರು ।
ವಾಯಿತೆಮಗೆಂದೊಡನೆ ದಶರಥರಾಯನಳವಳಿದ ॥೯॥

ದಶರಥ:— ರಾಮನಕಟಾ ಹಸುಳಿಭಾರ್ಗವ ।
ರಾಮನಗ್ಗದ ಜವನು ಭೂಮಿಯೊ ।
ಳಾಮಹೀಶಾಧೀಶವಂಶಾರಣ್ಯವನು ಚರಿದ ॥
ಭೀಮಬಲವಿಕ್ರಮದಜಗದಭಿ ।
ರಾಮಸಿಲುಕಿದನಿನಕುಲಾಂಬುಧಿ ।
ಸೋಮಕೈವಶವಾದನೇ ಹಾಯೆನುತಹರಿತಂದ ॥೧೦॥

ರಾಮ:— ಕಂಡನೈಯ್ಯನಮನದ ಧೈರ್ಯದ ।
ದಂಡಿಯನು ನೀಬೇಡಿಕೊಳಲೇ ।
ಕಂಡಲೆದು ಕೆಲಸಾರಿಸ್ಯೆರಿಸಿ ನಿಮಿಷಮಾತ್ರದಲಿ ॥
ಖಂಡಪರಶು ಮಹೋಗ್ರಚಾಪನಿ ।
ಖಂಡನನು ಸುಳಿಸಿದನು ನಿಶಿತಸು ।
ಕಾಂಡವನು ಭೃಗುಸುತನಕೊಡಲಿಯ ಕೊರಳಸರಿಸದಲಿ ॥೧೧॥

ಉಸುರಲೇನದ ಕಲ್ಪದಲಿಸುಳಿ ।
ವಶನಿಗೆಣೆಯೆನಿಸುವ ಮಹಾಯುಧ ।
ವೆಸವುದ್ವೈವ್ಯೋಮದಲಿ ರಾಮನ ತೋಮರಾಗ್ರದಲಿ ॥
ಪಶುಪತಿ ಬ್ರಹ್ಮಾಮರರುಮಾ ।
ನಸದೊಳರಿದದು ಪಲ್ಲಟಿಸಿತಿ ।
ನ್ನಸುರಹರನವತಾರವೆಂದುಬ್ಬಿದರು ಹರುಷದಲಿ ॥೧೨॥

ಘನತರದಕ್ರೋಧಾಗ್ನಿ ಮಿಗೆಸಂ ।
ಜನಿಸಿ ಯಿರೆಭಾರ್ಗವನುಗ್ರವೈಷ್ಣವ ।
ಧನುವನುಗಿದೇರಿಸಿದನವನೀನಾಥರಳವಳಿಯೆ ॥
ವನಜಸಂಭೂತಾಂಡವೆಡಬಲ ।
ಕೊನೆಯೆ, ಬಿಲುದನಿದೋರಿಕೋಲಿನ ।
ಕೊನೆಗೆಕೈಯಿಕ್ಕಿದನು ದಿವ್ಯಾಮೋಘಮಂತ್ರದಲಿ ॥೧೩॥

ಮನದೊಳಗೆ ನಸುನಗುತನಿಮ್ಮಯ ।
ಜನಕರಥದಿಂದಿಳಿದು ಪಾರ್ಥಿವ ।
ಜನಹಾಂಬುಧಿ ವಡಬನೆಡೆಗಿದಿರಾಗಿನಡೆತಂದ ॥
ಅನಿಮಿಷರು ಕೊಂಡಾಡೆಹೂಡಿದ ।
ಧನುವಮೇಲ್ವಾಯ್ದುಗಿದು ಗೊಂಡಾ ।
ಮುನಿಗೆ ಬಳಿಕೀಮಾತನೆಂದನು ಮಧುರವಚನದಲಿ ॥೧೪॥

ರಾಮ:— ನೀವು ವಿಪ್ರರುವಿಪ್ರಹಿಂಸಾ ।
ವ್ಯಾವಹಾರಿಕವೆಮಗೆ ದುಷ್ಟವ ।
ಲಾ ವಿಶೇಷಜ್ಞಪ್ತಿಸೂಕ್ತಿಕ ರೋದೆವರ್ಣದಲಿ ॥
ನೀವುವಂದ್ಯರುನಮಗೆ ನಿಮಗಿ ।
ನ್ನಾವಜಂಜಡಬೇಡ ತಪದಫ ।
ಲಾವಳಿಯೆಸಾಕಿನ್ನು ಬಿಜಯಂಗೈಯಿನೀವೆಂದ ॥೧೫॥

ಭಾರ್ಗವರಾಮ:- ಮನುಜನಲ್ಲೀತನು ಮದೀಯ ।
ಧ್ವನಿಗೆ ಭೂಭುಜ ವರ್ಗದಬಲಾ ।
ಜನದ ನಿಬ್ಬರ ಗರ್ಭಕಳಚುವುದೆಮ್ಮ ಕೋಪದಲಿ ॥
ಜನಪರುಳಿದವರಿಲ್ಲ ವಿದುಗೋ ।
ಮಿನಿಯಗಂಧನ ಘನತರದ ಘಾ ।
ಡಣೆಯಲಾಗತಿ ಪಲ್ಲಟಿಸಿತೆನುತುಬ್ಬಿದನು ರಾಮ ॥೧೬॥

ಆಯಿತೆಮ್ಮವತಾರವೀರಾ ।
ಮಾಯಣದ ನಾಟಕಕೆದೀಪ್ತಿ ।
ನ್ಯಾಯದವೊಲೆನುತಪ್ಪಿ ಬಳಿಕಕ್ಷಯನಿಷಂಗಮದ ॥
ಸಾಯಕವನೊಲಿದಿತ್ತು ತಾಪಸ ।
ರಾಯತೆರಳಿದನಾಶ್ರಮಕೆ ಬಳಿ ।
ಕಾಯಿತಧಿಕೋತ್ಸವವು ದಶರಥಸಾರ್ವಭೌಮಂಗೆ ॥೧೭॥

ಹೀಗೆ ರಘುರಾಮನಿಂದ ಭಾರ್ಗವರಾಮನು ಅಂದರೆ ಪರಶುರಾಮನು ಖಾಡಾಖಾಡಿಯ ಯುದ್ಧದಲ್ಲಿ ಪರಾಜಿತನಾದನು. ಯಾವನು ಇಪ್ಪತ್ತೊಂದುಬಾರಿ "ನಿರ್ವೀರ್ಯಮೂರ್ವೀತಳೆ" ಅಂದರೆ ಭೂಮಿಯಮೇಲಿ ವೀರಕ್ಷತ್ರಿಯರು ಉಳಿಯದಂತೆಮಾಡಿ ಮೆರೆದಿದ್ದನೋ, ಅಂತಹ ಪರಶುರಾಮನು ರಘುರಾಮನಿಗೆ ಸೋತು ಪೂರ್ಣ ಒಪ್ಪಿಗೆಯಿಂದ ತನ್ನ ಬಾಣಬತ್ತಳಿಕೆಯನ್ನು ರಾಮನಿಗೆ ಕೊಟ್ಟು ತನ್ನಾಶ್ರಮಕ್ಕೆ ತೆರಳಬೇಕಾಯಿತು. ಒಂದೊಂದು ಕಾಲಕ್ಕೆ ಒಬ್ಬೊಬ್ಬರು ಪ್ರತಿಷ್ಠಿತ ಪುರುಷರಾಗುವರು. ಅವರ ಅವತಾರ ಮುಗಿದೊಡನೆಯೇ ಅವರ ಶೌರ್ಯಧೈರ್ಯಾದಿಗಳು ತಮ್ಮಷ್ಟಕ್ಕೆ ತಾವೇನಿಂತು ಹೋಗುವವು. ಆದುದರಿಂದ ಯಾರೂತಾವು ಅಜಿಂಕ್ಯರೆಂದು ಹೆಮ್ಮೆಪಡಬಾರದು. ಹಾಗೆ ಮಾಡಿದಲ್ಲಿ ಪರಶುರಾಮನಗತಿಯೇ ಅವರಿಗಾಗುವದು. ಈ ನೀತಿಯನ್ನು ಗ್ರಂಥ ಕರ್ತನು ಮೇಲಿನ ವಿವಾದದಲ್ಲಿಸ್ಪಷ್ಟವಾಗಿ ಹೇಳಿರುವನು.

ಮೇಲಿನ ಆರನೆಯ ಪದದಲ್ಲಿ ವಿಪ್ರರ ಕಾರ್ಯಯಾವುದು? ಕ್ಷತ್ರಿಯರ ಕಾರ್ಯವೇನು? ಇದನ್ನು ಗ್ರಂಥಕರ್ತನು ವಿಸ್ತರಿಸಿ ಹೇಳಿರುವನು. ರಾಮನಕಾಲಕ್ಕೆ ಈ ಮಾತು ಸರಿಹೋಗಬಹುದು. ಇದು ಸಾರ್ವತ್ರಿಕವೆಂದು ಹೇಳಲಾಗದು. ಆದರೆ ಈ ದುಷ್ಟಕಟ್ಟು ಪ್ರಚಾರದಲ್ಲಿದ್ದುದರಿಂದ ಭಾರತ ಭೂಮಿಗೆ ಇಂದು ಈ ವಿಪನ್ನಾವಸ್ಥೆ ಬಂದೊದಗಿತು. ಯಾವದೇಶದ ಜನರೆಲ್ಲ ಯುದ್ಧ ಕಲೆಯಲ್ಲಿ ಶಿಕ್ಷಣ ಹೊಂದಿ, ತಮ್ಮರಾಜ್ಯ ಸಂರಕ್ಷಣೆಯಲ್ಲಿ ಆತುರ ಪಡುವರೊ, ಆದೇಶವು ತನ್ನ ಸ್ವಾತಂತ್ರ್ಯವನ್ನು ಕಳಕೊಂಡ ಉದಾಹರಣೆಗಳು ವಿರಳ. ಅಲ್ಪಸಂಖ್ಯಾಕರಾಗಿದ್ದ ಕ್ಷತ್ರಿಯರೊಬ್ಬರಿಗೇ ರಾಷ್ಟ್ರ ಸಂರಕ್ಷಣೆಯ ಉದ್ಯೋಗವನ್ನು ವರ್ಣವಾದಿಗಳು ಒಪ್ಪಿಸಿದ್ದರಿಂದ, ಹಿಮಾಚಲದಿಂದ ಜಾರಿಬೀಳುವ ಹಿಮರಾಶಿಯೋಪಾದಿಯಲ್ಲಿ, ತಂಡತಂಡವಾಗಿ ಏರಿಬಂದ ಯವನ ಮಂಗೋಲಿಯ ಮುಂತಾದ ದೇಶಗಳಿಂದ ಬಂದ ಶತ್ರುಗಳೊಡನೆ ವೀರತನದಿಂದ ಕಾದಾಡಿ, ಅನೇಕ ರೀತಿಯಿಂದ ನಷ್ಟವಾದ ಕ್ಷತ್ರಿಯರಿಗೆ ಮಿಕ್ಕಾದ ಮೂರುವರ್ಣದವರ ಸಹಾಯವಿಲ್ಲದ್ದರಿಂದ, ಅವರು ಸೋತು ಪರಕೀಯರಿಗೆ ಭಾರತ ಭೂಮಿಯನ್ನೊಪ್ಪಿಸಿದ್ದರಲ್ಲೇನಾಶ್ಚರ್ಯ? ಭಾರತದ ಈಗಿನ ದಾಸ್ಯತ್ವಕ್ಕೆ ವರ್ಣವ್ಯವಸ್ಥೆಯೇ ಕಾರಣವೆಂದು ಬಲ್ಲವರ ಅಭಿಪ್ರಾಯ. ಹೀಗೆಕಟ್ಟಿದ್ದರೂ,ಕುರುಬರು, ತಳವಾರರು, ಬೇಡರು, ಲಿಂಗವಂತರು, ಬ್ರಾಹ್ಮಣರು, ·ಮರಾಠರು, ಇವರಲ್ಲಿ ಬಲಿಷ್ಠರಾದವರು ಕ್ಷಾತ್ರತೇಜವನ್ನು ಹಿಂದೂದೇಶದ ಇತಿಹಾಸದಲ್ಲಿ ಮೆರೆಯಿಸಿದ ಉದಾಹರಣೆಗಳು ಕೆಲವುಂಟು. ಇವರಲ್ಲಿಯ ಈವೀರರಸವು ಪರಿಸ್ಥಿತಿಗನುಸರಿಸಿ ತನ್ನಷ್ಟಕ್ಕೆ ತಾನೇ ಹೊರಸೂಸಿವೆ.

ಕಾಂಗ್ರೆಸ ಸರಕಾರದ ಧ್ಯೇಯದಂತೆ ಹಿಂದುಸ್ಥಾನಕ್ಕೆ ಸ್ವತಂತ್ರತೆ ಲಭಿಸಬೇಕಾದರೆ, ಉಚ್ಚನೀಚಭಾವವಳಿದು ಎಲ್ಲರೂ ಒಕ್ಕಟ್ಟಿನಿಂದ ರಾಷ್ಟ್ರೋದ್ಧಾರ ಕಾರ್ಯದಲ್ಲಿ ತೊಡಗಬೇಕು, ಅಂದರೆ ಯುದ್ಧಶಿಕ್ಷಣವು ಎಲ್ಲರಿಗೂ ದೊರೆಯುವಂತೆ ಏರ್ಪಾಡು ಆಗತಕ್ಕದ್ದು ಅತ್ಯವಶ್ಯವೆಂದು ತಿಳಿಯಬೇಕು.

ಈ ಧ್ಯೇಯಸಾಧನೆಗಾಗಿ ಚಿಕ್ಕಮಕ್ಕಳಲ್ಲಿ ದೇಶಾಭಿಮಾನ ಸ್ವಜನಾಭಿಮಾನ ಮುಂತಾದ ಗುಣಗಳನ್ನು ಹುಟ್ಟಿಸುವಂಥ ವಿದ್ಯೆ, ಮತ್ತು ಉತ್ತಮವಾದ ಶಾರೀರಿಕ ಶಿಕ್ಷಣ, ನಿಸ್ವಾರ್ಥ ನಾಗರಿಕತನ, ಮತ್ತು ಸಾಮಾನ್ಯವಾದ ಯುದ್ಧಕಲಾ ಶಿಕ್ಷಣ, ಇವೆಲ್ಲವುಗಳನ್ನೊಳಗೊಂಡ ಶಾಲೆ ಕಾಲೇಜುಗಳ ವ್ಯವಸ್ಥೆಯಾಗುವದು ದೇಶಹಿತ ದೃಷ್ಟಿಯಿಂದ ಒಳ್ಳೇದು.



# ೧೪ನೆಯ ಪಾಠ

## ರಾಮರಾವಣರ ಅಸದೃಶಯುದ್ಧ.

ರಾವಣನು ಸ್ವತಃಯುದ್ಧಕ್ಕೆ ಬರುವವರೆಗೆ ಆತ ನಸೇನಾನಾಯ-ಕರೂ, ಇಂದ್ರಜಿತು, ಅತಿಕಾಯ, ವಿರೂಪಾಕ್ಷ ಮೊದಲಾದ ಅವನ ಮಕ್ಕಳೂ, ಆತನ ತಮ್ಮನಾದ ಕುಂಭಕರ್ಣನೂ ನಾಯಕರಾಗಿ, ಬಲುಶೌರ್ಯದಿಂದ ಹೋರಾಡಿ ಪರಪಕ್ಷದವರಿಂದಲೂ ಹೊಗಳಿಸಿಕೊಂಡು ಯುದ್ಧದಲ್ಲಿ ಮಡಿ-ಯುವರು. ರಾವಣನಸೈನ್ಯವು ೭೦೦ ಅಕ್ಷೋಹಿಣಿ ಸಂಖ್ಯೆಯದಾಗಿತ್ತೆಂಮ ಹೇಳಿದೆ. ರಾಮನ ಕಡೆಯ ಕಲಿಗಳು ಅಂದರೆ ಅಂಗದ, ನೀಲ, ಸುಗ್ರೀವ, ಹನುವಂತ, ಜಾಂಬವಾದಿಗಳುಸಹ ತಮ್ಮ ಧೈರ್ಯಸ್ಥೈರ್ಯಗಳನ್ನು ತೋರಿಸು ವರು. ಅಂಗದ ಹನುಮಂತ ಲಕ್ಷ್ಮಣಮೊದಲಾದವರು ಯುದ್ಧದಲ್ಲಿ ಮಡಿದರೂ, ಚಂದ್ರದ್ರೋಣಗಿರಿಯಿಂದ ಸಂಜೀವಿನಿ ಔಷಧವನ್ನು ಗರುಡನು ತಂದು ಸತ್ತವರನ್ನು ಪುನಃ ಬದುಕಿಸುವನು. ಇಷ್ಟಾದರೂ ರಾವಣನು ಎದೆಗುಂದದೆ ಬಿಟ್ಟೂಬಿಡದೆ ಹದಿನೇಳುದಿವಸ ತನ್ನ ಬಾಹುಬಲದಿಂದ ಕಾದಾಡುವನು. ರಾವಣನು ಶಕ್ತಿಪೂಜೆಯಂ ಮಾಡಿ ಯುದ್ಧಕ್ಕೆ ಅನುವಾಗುವನು. ಯುದ್ಧದಲ್ಲಿ

ರಾವಣನತಲೆಗಳು ಕಡಿದುಬಿದ್ದರೂ ಪುನಃ ಅವುಚಿಗಿಯುತ್ತಿದ್ದವು. ಇದರಿಂದ ರಾಮನಿಗೆ ರಾವಣನೊಡನೆ ಯುದ್ಧಮಾಡುವದು ಸರಿದೋರಲಿಲ್ಲ. ಅದ್ದರಿಂದ ರಾಮನು ರಾವಣನೊಡನೆ ಯುದ್ಧವನ್ನು ನಿಲ್ಲಿಸಿ ಸಖತ್ವದಿಂದ ತನ್ನ ನಗರಕ್ಕೆ ತೆರಳಬೇಕೆಂದು ಕೆಳಗಿನ ಶ್ಲೋಕಗಳಿಂದ ತಿಳಿಸುವನು-ಅದಕ್ಕೂ ರಾವಣನು ಒಪ್ಪದಾದನು. ಪುನಃ ಆತನೊಡನೆ ಕಾದಾಡಿ ರಾಮನು ಬೇಸರಪಟ್ಟು ವೀಭಿಷಣನಿಗೆ ರಾವಣನ ಮನಸ್ಸಿನಸ್ಥಿತಿಯಬಗ್ಗೆ ವಿಚಾರಿಸುವನು. ವಿಭೀಷಣನು ರಾವಣನಿಗೆ ಮಹಾದೇವನ ವರವು ಲಭಿಸಿದ್ದರಿಂದ ಬೇರೆಕಡೆ ಅವನಿಗೆ ಅಪಾಯವಾಗದು. ಉರದಲ್ಲಿ ಹೊಡೆದರೆಮಾತ್ರ ಅವನು ಪರಾಜಿತನಾಗುವನು ಎಂದುಹೇಳಲು, ರಾಮನು ತನ್ನ ಕಡೆಯಬಾಣದಿಂದ ಉರಪ್ರದೇಶವನ್ನು ಹೊಡೆಯಲು, ರಾವಣನು ಮೂರ್ಛಿತನಾಗಿ ಬೀಳುವನು. ಈ ಸಂಗತಿಗಳು ಕೆಳಗಿನ ಶ್ಲೋಕಗಳಿಂದ ವ್ಯಕ್ತವಾಗುವವು

ಕಡಿದುವಿಕ್ಕಿದು ದೀಪರಿಯಲಾ ।
ಕಡುನಿಶಿತ ಶರವರಿಯಕಂಧರ ।
ದಡವಿಯಲಿ ತಲೆಬೀಳುತಿರ್ದವು ಕೋಟಿಸಂಖ್ಯೆಯಲಿ ॥
ಕೆಡವತಲೆಖದ್ಯೋತಸರಣಿಗೆ ।
ಸಿಡಿದತಲೆ ಮಾರ್ಗಣದಮುಖದಿಂ ।
ದುಡಿವತಲೆಗೆಡದೆರಹಕಾಣೆನು ಕಂದಕೇಳೆಂದ ॥೧॥

ಕೋಲಮಳೆಗರದಸುರರಾಯನ ।
ತೋಳುಗಳಿಗೊಮ್ಮೊಮ್ಮೆ ಮುಂಡದ ।
ಲೇಳುವಗಣಿತ ತಲೆಗಡಿತಕೊಮ್ಮೊಮ್ಮೆ ಮಾರ್ಗಣವ ॥
ಬೀಳುಕೊಡುತಿರ್ದನು ಮಹೋಗ್ರಕ ।
ರಾಳಮಸ್ತಕ ಹಸ್ತಚಾಪಶ ।
ರಾಳಿಸಹಿತುದ್ಭವಿಸುತಿರ್ದುದು ಕಾಯದಲಿಖಳನ ॥೨॥

ರಾಮ:— ಸಾಕುಮಾಡೆಲೆಸಮರ ನಾವ್ರುಸ ।
ಮೂಕಬಾಹಿರರರಿಶಿರಂಗಳ ।
ನೂಕಿ ಬೇಸತ್ತೆವು ಶರಂಗಳ ಸೋಲುವೆಮಗಾಯ್ತು ॥
ಓಕರಿಸಿದಳು ಮೃತ್ಯುವೀಲೋ ।
ಕೈಕವೀರನ ನಮಗೆತಾನಿಂ ।
ನೇಕೆಜಯದಭಿಲಾಷೆ ತಿರುಗಿಸುತೇರಕೆಳಗೆಂದ ॥೩॥

,, ತೆರಳುನೀನಿನ್ನೇನಮಾಡುವೆ ।
ಹಿರಿದುಬಳಲಿದೆ ಸಾರಥಿತ್ವದ ।
ಹರಹಿನಲಿ ರಿಪುವಿಜಯ ವಿಶ್ರುತಿಗಾವುಭಾಗ್ಯರಲೆ ॥
ವರವಿಭೀಷಣದೇವಬಾನವ ।
ಗೆರಡುನಾಲಿಗೆ ಯಾದುದೆಮ್ಮನು ।
ಶರಣಹೊಕ್ಕರಿಗಾದುದಪಜಯವೆಂದನಾರಾಮ ॥೪॥

,, ಶರಣುಹೊಗು ನಿಮ್ಮಣ್ಣದೇವನ ।
ಮರಳಿನಮ್ಮೊಡನಾಡಿಕೆಡಬೇ ।
ಡೆರಡುಕಡೆಯಲಿ ಕಷ್ಟತರವೆಮಗಾಯ್ತು ಲೋಕದಲಿ ॥
ಹಿರಿದುಬಳಲಿದೆ ಹೋಗೆನುತನಿಜ ।
ಕರವಮುಗಿದು ದಿನೇಂದ್ರತನುಜನ ।
ಕರದುನುಡಿದನು ಮನದಮುಗುಡವ ಮಧುರವಚನದಲಿ ॥೫॥

,, ಸೇವೆಯಲಿ ನಿಂನಿಂದಬಿಟ್ಟೆ ।
ನ್ನಾವನ್ಯೆಹನುಮಂತ ಮಂತ್ರಕ ।
ಳಾವಿಶೇಷಜ್ಞರಲಿ ಜಗದೊಳಗಾರುಸರಿನಿನಗೆ ॥
ಭಾವಿಸಿದಿರೇ ಜಾಂಬವರೆಸ ।
ದ್ಭಾವದಲಿ ನೀವುತ್ತರಾಯಿಗ ।
ಳಾವುದೈವವಿಹೀನರಾದೆವು ತೆರಳಿನೀವೆಂದ ॥೬॥

ತಮ್ಮಬಾಜಗವರಿಯಲೂಣಯ ।
ನೆಮ್ಮಿತೆಂಮನದಾವಮೋರೆಯ ।
ಲೆಮ್ಮ ಮಾತೃತ್ರಯದ ಮುಸುಡನು ಗುರುಗಳಾನನವ ॥
ತಮ್ಮದಿರವದನವನು ಕಾಬೆವು ।
ತಮ್ಮಕೇಳ್ವೆ ತೆರಳುನೀ ।
ನವ್ಮೊಡನೆ ಬಳಲಿಕೆಯ ಬಳಸದೆ ಪುರಕೆಮರಳೆಂದ ॥೭॥

ರಾಮನ ಈ ವಿಚಾರವು ಲಕ್ಷ್ಮಣನಿಗೆ ಸರಿಬಾರದ್ದರಿಂದ ಅವನು ರಾಮನಿಗೆ ತ್ರಿಗುಣಾತೀತರಾದ ಸಚ್ಚಿದಾನಂದ ಸ್ವರೂಪ ತ್ರಿಮೂರ್ತಿಗಳನ್ನು ನೆನೆಯೆಂದು ಹೇಳಿ ರಾಮನನ್ನು ಯುದ್ಧಕ್ಕೆ ಅಣಿಮಾಡಿದನು. ಅದರಂತೆ ರಾಮನು ತನ್ನ ಧನುಸ್ಸಿಗೆ ಮಹಾಶರವನು ಹೂಡಿ ರಾವಣನಿಗೆದುರಾದನು. ರಾವಣನ ದೃಷ್ಟಿಗೆ ಸರ್ವತ್ರ ರಾಮಮೂರ್ತಿಯೆ ಕಾಣಿಸಿತು. ಆಮೇಲೆ ರಾಮನು ಹೀಗೆನುಡಿದನು.

ನೋಡಿದನು ರಾವಣನನುಚಿತವ ।
ಕೂಡಿಕೊಂಡು ನಯೋಕ್ತಿಯಲಿಮಾ ।
ತಾಡಿದನು ಕೇಳೈದಶಾನನ ಮೂರುಲೋಕದಲಿ ॥
ರೂಢಿಸಿದ ಭಟನೀನುಕಾಮುಕ ।
ರಾಡಿಕೆಯಬಿಡುಕರದುತಮ್ಮನ ।
ಕೂಡಿಬದುಕಭಯಪ್ರದಾನವಿದೀಗನಿನಗೆಂದ ॥೮॥

ರಾವಣ:— ಶರಣುಹೊಗುವನಲ್ಲ ಮುಂದಣ ।
ಸಿರಿಯಬಯಸುವನಲ್ಲ ಸೀತೆಯ ।
ತಿರುಗಿಬಿಡುವವನಲ್ಲ ಮತಿಬೇರೆನ್ನ ಮಾನಸದ ॥
ಕರುಣನಿನಗಿನ್ನೇಕೆ ನಿನ್ನಯ ।
ಪರಿಯಬಲ್ಲೆನು ಬಿಡುಮಹಾಸ್ತ್ರವ ।
ಮರಣಕ್ಕೊರಳಿದೆನಾದಡೀಶ್ವರ ಭಜಕನಲ್ಲೆಂದ ॥೯॥

ವಿಭೀಷಣನು ರಾವಣನು ಸಾಯುವ ರಹಸ್ಯವನ್ನು ರಾಮನಿಗೆ ಹೇಳುವನು. ೮೯

ರಾಮ:— ಎಲೆವಿಭೀಷಣದೇವ ಮೂರ್ಖರ ।
ತಿಲಕನಿವನಿನ್ನಂತರಂಗದ ।
ನೆಲೆಯಹೇಳ್ಳೆ ಕೊಲಲೊಕೊಲಬೇಡವೊತವಾಗ್ರಜನ ॥
ತಿಳಯಲಿಬ್ಬರಿಗೊಬ್ಬತಾಯ್ ।
ಸಲೆಕರುಳ್ಗಳು ಮರುಗದಿರವವ ।
ಬಳವ ಹೇಳೆನ್ನಾಣೆ ಬಿಡೆಯವನುಡಿಯಬೇಡೆಂದ ॥೧೦॥

ವಿಭೀಷಣನು ಕಾಮುಕನಾದ ರಾವಣನು ನನ್ನ ಅಣ್ಣನಲ್ಲ. ನೀವೇ ನನಗೆ ಅಣ್ಣನೂ ಗುರುವೂ ಆಗಿದ್ದೀರಿ. ಹಿಂದೆ ನಂದೀಶ್ವರನ ಶಾಪದಿಂದ ಇವನಿಗೆ ಉರ(ವಕ್ಷ) ಸ್ಥಳದಲ್ಲಿ ಹೊಡೆದರೆ ಮರಣವೆಂದು ಗೊತ್ತಾಗಿದೆ. ಕಾರಣ ನೀವು ನಿಮ್ಮಬಾಣವನ್ನು ಅವನ ವಕ್ಷಸ್ಥಳಕ್ಕೆ ಗುರಿಯಿಟ್ಟು ಹೊಡೆದರೆ ಆತನು ಖಂಡಿತವಾಗಿ ಸಾಯುವನೆಂದು ವಿಭೀಷಣನು ಈ ರಹಸ್ಯವನ್ನು ತಿಳಿಸಲು, ರಾಮನು ಮಹಾಸ್ತ್ರವನ್ನು ತೊಟ್ಟು, ರಾವಣನಿಗೆ ಹೊಡೆಯುವ ಪೂರ್ವದಲ್ಲಿ, ಮತ್ತೊಮ್ಮೆ ರಾವಣನನ್ನು ಮುಂದಿನ ಹಾನಿಯಿಂದ ಸಲಹ ಬೇಕೆಂದು "ಕೊಲೆಗೊಡಂಬಟ್ಟೈವಿಚಾರಿಸು ಘನವನೀನೆಂದ" ಹೀಗೆ ತಿಳಿಸಲು ಇದಕ್ಕೆ ರಾವಣನು ಮೊದಲಿನಂತೆ ಉತ್ತರಕೊಡುವನು.

ರಾವಣನು:— ಮನವನೆರೆ ನಿರ್ಧಸಿದೆವುನೀ ।
ಮನುಜನಲ್ಲೆಂಬುದ ವಿವೇಕದ ।
ನೆನಹಿನಿಂದಾನರಿದೆನಂಜೆನು ತನುಪರಿಚ್ಯುತಿಗೆ ॥
ನಿನಗೆ ದಯಬೇಡಿನ್ನು ಧಿಟರಂ ।
ಜನೆಯನುಡಿ ಸಾಕೆನಲುತಪ್ಪದು ।
ಜನವರಿಯೆ ಹೊರೆಗಾವುಪಾಪಕೆ ತಪ್ಪದೇಯೆಂದ ॥೧೧॥

ಆಮೇಲೆ ರಾಮನು ಖಡ್ಗ ಖರ್ಪಣ ಪರಶು ಮತ್ತು ಪರಿಘವೆಂದು ಅನ್ನುವ ಆಯುಧಗಳನ್ನು ತನ್ನ ಮುಷ್ಟಿಯಲ್ಲಿ ಹಿಡಿದು ರಾವಣನ ವಕ್ಷ

ಸ್ಥಳಕ್ಕೆ ಜೋರಿನಿಂದ ಹೊಡೆಯಲು, ಆಖಡ್ಗಗಳೆಲ್ಲ ಅವನ ಉರವನ್ನು ಭೇದಿಸಿ ಹೊರಹಾಯ್ದವು. ದಶಾನನನು ಭೂಮಿಯಮೇಲೆ ಬಿದ್ದು ಮರಣ ಹೊಂದಿದನು. ಆಕಾಶದಲ್ಲಿ ಈ ಯುದ್ಧವಂ ನೋಡುತ್ತನಿಂತ ಸುರರು ಅಪ್ಸರ ಸ್ತ್ರೀಯರು ಹೂಮಳೆಗರೆದರು. ದೇವದುಂದುಭಿಗಳು ಮೊಳಗಿದವು. ರಾವಣನು ಇಷ್ಟೇಕೆ ತನ್ನ ಪ್ರಾಣದಮೇಲೆ ಉದಾಸೀನನಾದನು ಎಂಬ ಪ್ರಶ್ನೆಯು ಸಹಜ ಉದ್ಭವಿಸುವದು. ಪರಸತಿಗಳುಪಿದೆನೆಂಬ ಪಾಪದಸೋಂಕು ಅವನನ್ನು ಬಾಧಿಸುತ್ತಿತ್ತು. ರಾಮನಕ್ಷಮೆಯನ್ನು ಪಡೆದು ಸೀತೆಯಂ ಬಿಟ್ಟುಕೊಟ್ಟು ಲಂಕಾಧಿಪತಿಯಾಗಿ ಬಾಳುವದಕ್ಕಿಂತ ಅವನಿಂದ ಇರಿಸಿಕೊಂಡು ಸತ್ತರೆ, ತನಗೆ ಮುಕ್ತಿಯಾಗುವದೆಂದು ಆತನಿಗೆ ರಾಮನ ಘನತೆಯರಿವು ಕಟ್ಟಕಡೆಗಾಗಿ, ಹೀಗೆ ಕಡೆತನಕ ತನ್ನ ಛಲಸಾಧಿಸಿದನು.

ರಾವಣ:— ಈತನೀಗಲೆ ಜನನಮರಣಾ ।
ತೀತಮಾಯಾಮಹಿಮಸಗುಣಸ ।
ನಾತನನು ಸಂದೇಹತಾನಿನ್ನೇಕೆ ಪೂರ್ವದಲಿ ॥
ಈತನೊಡನೆ ವಿರೋಧವೆಮಗಭಿ ।
ಜಾತವಾದುದು ಲೋಕಮೂರರೊ ।
ಳೀತಕಂಜಿಕೆ ನನಗೆ ಮುಕ್ತಿಯು ಸೂರೆತನಗೆಂದ ॥೧೨॥

ಆದ್ದರಿಂದ ರಾಮರಾವಣರ ಯುದ್ಧವು ಅಪೂರ್ವವಾದದು. ಇದಕ್ಕೆ ಸರಿಯಾದದು ಕಾಣಬಾರದು. ಆದ್ದರಿಂದ ಅಲಂಕಾರಶಾಸ್ತ್ರಜ್ಞರು "ರಾಮ ರಾವಣಯೋರ್ಯುದ್ಧಂ ರಾಮರಾವಣಯೋರಿವ" ಎಂದು ಹೇಳಿದ್ದು ಯಥಾರ್ಥವು.

ಜಯಜಗತ್ಪತಿ ಜಯಜನಾರ್ದನ ।
ಜಯಜಗದ್ರಕ್ಷಕ ಜಯಾಚ್ಯುತ ।
ಜಯಜಯಾಸುರವಂಶಮದಮಾತಂಗಪಂಚಾಸ್ಯ ॥

ಜಯಜಗಜ್ಜಯ ಸುರನರೋರುಗ ।
ಭಯವಿಭಂಜನ ಎನುತಸುರನಾ ।
ರಿಯರು ಸುಳಿಸಿದರಿದಿರಿನಲಿ ಜಯಮಂಗಳಾರತಿಯ ॥೧೩॥



## ೧೫ನೆಯ ಪಾಠ.

## ಸೀತೆಯಂ ರಾಮನು ಅಗ್ನಿಮುಖದಲ್ಲಿ ಸ್ವೀಕರಿಸುವನು. ವಿಭೀಷಣನ ಪಟ್ಟಾಭಿಷೇಕ. ಎಲ್ಲರು ಮರಳಿ ಅಯೋಧ್ಯೆಗೆ ಬರುವರು.

ರಾವಣನು ಮಡಿದನಂತರ ಮಂಡೋದರಿಯು ಬಂದು ಶೋಕಿಸುವಳು. ರಾಮನು ಅವಳಿಗೆ ಹಿಂದಾದುದಂ ಮರೆತು ವಿಭೀಷಣನನ್ನು ಮುಂದೆ ಪಟ್ಟಗಟ್ಟಿ ಸುಖವಾಗಿ ಬಾಳಿರೆಂದು ಅವಳಿಗೆ ಸಮಾಧಾನಹೇಳುವನು. ರಾವಣನ ಶವಕ್ಕೆ ಯಥಾವಿಧಿ ಅಂತ್ಯಸಂಸ್ಕಾರವಾಗುವದು. ಅವನಕೂಡ ಅನೇಕ ಸ್ತ್ರೀಯರು ಸಹಗಮನಮಾಡುವರು. ಆಮೇಲೆ ವಿಭೀಷಣನಿಗೆ ರಾಮನಿಂದ ಪಟ್ಟಾಭಿಷೇಕ ಸಂಭ್ರಮವೆಸಗುವದು. ಇತ್ತಹನುಮಂತನು ಸೀತೆಯಿದ್ದೆಡೆಗೆ ಬಂದು ಅವಳಿಗೆ ರಾವಣನ ಅಪಜಯ ಮತ್ತು ಮರಣದಸುದ್ದಿಯ ತಿಳಿಸಿ ಅವಳಪತಿವ್ರತಾಧರ್ಮದಿಂದಲೇ ತಮಗೆ ಯುದ್ಧದಲ್ಲಿ ಗೆಲವಾಯಿತೆಂದ ಹೊಗಳುವನು.

ಹನುಮ:— ಇದುವೆನಿಮ್ಮ ಪತಿವ್ರತಾಸಂ ।
ಪದದಗುಣವಲ್ಲದಡೆ ಕಲ್ಲಿನ ।
ಲುದಧಿಕಟ್ಟೆಸಿ ಕೊಂಬುದೇಕಪಿಗಳು ನಿಶಾಚರರ ॥

ಕದನದಲಿ ಜಯಿಸುವರೆಕಲಿದಶ ।
ವದನನಳಿವನೆ ತಾಯಿಯೆಂದಾ ।
ಮದನಮದ ಮುಖವೈರಿ ಮಹಿಜಾಸತಿಗೆ ಕೈಮುಗಿದ ॥೧॥

ಸೀತೆಯಉತ್ತರ:–ಕಳುಹಿದೆನು ಕಾಂಚನದಹರಿಣನ ।
ಬಳಿಯ ಬಯಕೆಯ ಭರದಲರಸನ ।
ಕಳುಹಿದೆನು ಕೆಡೆನುಡಿದು ಕಾಂತಾರದಲಿವೈದುನನ ।
ಖಳನಕೈವಶವಾದೆಯಿದುಘಾ ।
ತಳಿಕೆಯಲ್ಲವೆ ಹೆಂಗುಸಿಗೆಮನ ।
ದೊಳಗೆ ರಘುಪತಿಯೇನಬಗೆವನೊ ಯೆಂದಳಿಂದುಮುಖಿ ॥೨॥

ಮಾತನಾಡಿಸಿ ಕೇಳಿದರೆತಾ ।
ನೇತರಿಂದುತ್ತರವ ಕೊಡುವೆನು ।
ಮಾತನಾಡದನನಿಪನನೇನೆಂದು ನುಡಿಸುವೆನು ॥
ಓತಡೆನ್ನಯ ಭಾಗ್ಯವೊಲಿಯದ ।
ಡೇತರದ ಬಳಿಕುಳಿವು ಹೊಗುವೆನು ।
ವೀತಿಹೋತ್ರನನೆಂದು ಕಂಬನಿದುಂಬಿದಳು ಸೀತೆ ॥೩॥

ಸೀತೆಯಾಡಿದ ನುಡಿಯಕೇಳಿ, ಲಂಕಾಧಿಪನಾದ ವಿಭೀಷಣ ನಿದ್ದೆಡೆಗೆ ಹೋಗಿ, ಅವನಿಗೆ ತಾವಿಬ್ಬರೂ ಹೋಗಿ ಸೀತೆಯಂ ಕರತಂದು ರಾಮನಪಾದಕ್ಕೆ ಕೆಡವಬೇಕೆಂದು ಚಿಂತಿಸಿ, ಇಬ್ಬರೂಸೀತೆಯಬಳಿಗೆ ಬಂದು ಆಕೆಯಂಘ್ರಿಗೆ ತಮ್ಮ ಮಸ್ತಕವನಿಳುಹಿ ಹೀಗೆ ಅನ್ನುವರು–

ವಿಭೀಷಣ:— ಡಿಂಗರಿಗನಾ ನಿಮಗೆನಿಮ್ಮರ।
ಸಂಗೆಕಿಂಕರನಾಗಿ ಕೃಪೆತ ।
ನ್ನಂಗದಲಿ ನೆಲೆಗೊಳಲಿ ಬಳಲಿದಿರೆಮ್ಮದೆಸೆಯಿಂದ ॥

ಕಂಗಳಲಿ ಮುಂಗಾಣದಗ್ರಜ ।
ಹಿಂಗಿದನು ನಾವ್‍ನಿಮ್ಮ ಪದಪ ।
ದ್ಮಂಗಳನು ಸಾರಿದೆವು ಸಲಹುವದಿನ್ನು ನೀವೆಂದ ॥೪॥

ಸೀತೆ:— ಕರಸರೋಜದಿನಾನಿಜೇಶನ ।
ಚರಣ ಶರಣನ ಮಣಿಖಚಿತಬಂ ।
ಧುರಕಿರೀಟವನೆತ್ತಿ ಕೇಳೈ ಕಲಿವಿಭೀಷಣನೆ ॥
ನರಪತಿಗೆ ನಿನ್ನಿಂದ ಜಯವಿ ।
ಸ್ತರಣವಾದದು ನಿನ್ನವೋಲ್‍ಭೃ ।
ತ್ಯರುಗಳಿನ್ನಾರುಂಟು ಜಗದೊಳಗೆಂದಳಿಂದುಮುಖಿ ॥೫॥

ಹೀಗೆಂದಬಳಿಕ ಸೀತೆಯಂ ತಾವು ತಂದ ಅಂದಣದಲ್ಲಿ ಕೂಡ್ರಿಸಿ ತನ್ನರಮನೆಗವಳ ಬರಮಾಡಿಕೊಂಡು, ಅಭ್ಯಂಗನಾದಿ ಕ್ರಿಯೆಗಳಂ ತನ್ನ ಸ್ತ್ರೀಯರಿಂದಮಾಡಿಸಿ, ವಸ್ತ್ರಾಂಬರಗಳನ್ನುಡಿಸಿ ರಾಮನಿದ್ದೆಡೆಗೆ ಕರತರುವನು. ಆಮೇಲೆ ಲಕ್ಷ್ಮಣನು ಅವಳನ್ನಂಗೀಕರಿಸಬೇಕೆಂದು ಬೇಡಿಕೊಳ್ಳುವನು. ಬಳಿಕ ವಿಭೀಷಣನೂ ಅದರಂತೆ ರಾಮನಿಗೆ ಬೇಡಿಕೊಳ್ಳುವನು. ಇದಕ್ಕೆ ರಾಮನ ಉತ್ತರ:—

ರಾಮ:— ಸ್ತ್ರೀಯಲೋಕದೊಳಿವಳು ಲೋಕವ ।
ಮಾಯಕಾತಿಯರಿವಳಶಿಷ್ಯರು ।
ನೋಯನುಡಿದಡವಿಯಲಿ ನೂಕಿದಳಿವಳು ಲಕ್ಷ್ಮಣನ ॥
ಮಾಯದೆರಳೆಯ ನೆವದಲಸುರರ ।
ರಾಯನಲಿಸಂಗೀತನಡೆದುದು ।
ದಾಯತಪ್ಪಿತು ಕಡೆಯಲಿದನೀವರಿಯಿರೈಯೆಂದ ॥೬॥

,, ಇವಳಿಗೋಸುಗ ಬಂದುಹಗೆಯನು ।
ತವಿಸಲಿಲ್ಲನರಣ್ಯನನು ತಾ ।
ನಿವನು ಕೊಂದನು ಪೂರ್ವದಲಿ ನಮ್ಮನ್ವಯಾಗತದ ॥

ಇವನ ಕೊಲಲ್ಕೈತಂದೆವಲ್ಲದೆ ।
ವಿವಶೆಯಾದೀಸತಿಯ ಹಂಬಲಿ ।
ನವರು ನಾವಲ್ಲೆಮ್ಮ ನಿರ್ಬಂಧಿಸಲು ಬೇಡೆಂದ ॥೭॥

ಸೀತೆ:— ತಪ್ಪು ಹೊರದವ ನಾವಶಪಥವ ।
ಒಪ್ಪುಗೊಳಲದ ಮಾಡುವನು ಧಿಟ ।
ತಪ್ಪು ಸಂಧಿಸಿತಾದಡಲ್ಲಿಯೆ ಬಿಡುವೆನೀತನುವ ॥
ಒಪ್ಪುವುದು ಬಿನ್ನಹವನಿಂದತಾ ।
ನಿಪ್ಪುರಿಯ ಕಾಮಿನಿಯೆನಿನಗೆಸ ।
ಮರ್ಪಿಸಿದ ತನುವಾದಡೊಲಿ ಬಳಿಕೆಂದಳಿಂದುಮುಖಿ ॥೮॥

,, ದೇವನೀನಲ್ಲದೆ ಇತಃಪರ ।
ವಾವುದನು ನಾಬಲ್ಲೆನಾದಡೆ ।
ದೇವತತಿಯಿದೆ ದಿವ್ಯಮುನಿಜನವಿದೆ ಸಮೀಪದಲಿ ॥
ತಾವರೆಯನೈದಿಲಿನಸಖವಂ ।
ಶಾವಳಿಯ ನೃಪರಿದೆ ನಿರೀಕ್ಷಿಸಿ ।
ಕಾವುದಿಲ್ಲಿಂಮೇಲೆನುತು ಬಿನ್ನೈಸಿದಳುಸೀತೆ ॥೯॥

ಹೀಗೆ ಸೀತೆಯು ಅಗ್ನಿಪ್ರವೇಶಮಾಡಿ ತನ್ನ ಸಾಧ್ವೀತನವನ್ನು ಜಗದಮುಂದೆ ತೋರಿಸಲನುವಾಗಿದ್ದರೂ, ಲಕ್ಷ್ಮಣನು ತಾನೇ ಮುಂದೆಬಂದು ಅವಳಸಲುವಾಗಿ ತಾನು ಉರಿಯಲ್ಲಿ ಧುಮುಕುವನು. ಅದರಿಂದ ತನಗೇನಾದರೂ ಗಾಯವುಂಟಾದರೆ ದೇವಿಯನ್ನು ಬಿಡಲಿ, ಅಥವಾ ಅಗ್ನಿಯ ಸೋಂಕು ಬೆರಸದಿದ್ದರೆ ಅವಳನ್ನು ರಾಮನು ಅಂಗೀಕರಿಸಲೆಂದು ಮುಂದೆ ಬರಲು, ಇದನ್ನು ತಪ್ಪಿಸುವದಕ್ಕಾಗಿ ಸೀತೆ ತಾನೇ ತನ್ನ ಪರೀಕ್ಷೆಗೆ ಸಿದ್ಧಳಾಗುವಳು.

ಸೀತೆ:— ಕೇಳಿದ್ದೈ ಸೌಮಿತ್ರಿಮಿತ್ರಕು ।
ಲಾಳಿಗುಪಹತಿ ಬಾರದಂತಿರೆ ।
ಬೀಳುವೆನು ಶುಚಿಯಾದಡೇಳುವೆನಗ್ನಿಕುಂಡಲಿಯ॥
ಮೇಲೆ ಮಾತಿನ್ನೇನು ವಂಶವಿ ।
ಶಾಲವೈಭವವೆನ್ನದೈಸಲೆ ।
ತೂಳಿಸಗ್ನಿಯನೊಟ್ಟಲಿಂಧನವೆಂದಳಿಂದುಮುಖಿ ॥೧೦॥

ಹೀಗೆಸೀತೆ ಹೇಳಿದಂತೆ ಅಗ್ನಿಕುಂಡವು ರಚಿಸಲ್ಪಟ್ಟಿತು. ಅದರಲ್ಲಿ ಒಣಗಿದ ಚಂದನದಮರಗಳನ್ನು ತಂದೊಟ್ಟಿದರು. ಆಮೇಲೆ ಕರ್ಪೂರದಿಂದ ಅದನ್ನು ಉರಿಗೊಳಿಸಿದರು. ಇದರಹೊಗೆಯು ಆಕಾಶಕ್ಕೆ ಮುಟ್ಟಿತು. ಆಕಾಶದಲ್ಲಿಯ ತಾರೆಗಳು ಇದರ ಜಳದಿಂದ ಸಿಡಿದುಬಿದ್ದವು. ಪಾರ್ವತೀದೇವಿಯು ಕಣ್ಣುಮುಚ್ಚಿಕೊಂಡಳು. ಸರಸ್ವತಿಯು ಅಂಜಿಬ್ರಹ್ಮನ ನಡುವನ್ನು ಸೇರಿದಳು. ಮತ್ತು ಈ ಶಿಖಿಯು ಸುರವಧೂಜನರನ್ನು ಕೂಡ ಅಂಜಿಸಿತು. ಇಂಥ ಭೀಕರ ಅಗ್ನಿಯಲ್ಲಿ—

ಸೀತೆ— ಅಳುಕುವರೆ ಸುವ್ರತೆಯರಗ್ನಿಗೆ ।
ಜಲಜಭವ ಭವಹರಿಗಳೆರಗುವ ।
ರುಳಿದವರಪಾಡೇನು ಪತಿಭಜನಾನುಚರಿತರಿಗೆ ॥
ಬಳಿಕಕೈಮುಗಿದೆಂದಳರಸಂ ।
ಗೆಲೆನೃಪೋತ್ತಮ ನಿನ್ನಶಿರಿಪದ ।
ನಳಿನವಲ್ಲದೆ ಬಲ್ಲರೊಳಕೊಳಲಗ್ನಿ ನಿಜತನುವ ॥೧೧॥

ಅಲ್ಲದಿರ್ದಡೆ ನಿನ್ನಶಿರಿಪದ ।
ಪಲ್ಲವವಕಾಣಿಸಲಿ ಮುಡಿದೀ ।
ಮಲ್ಲಿಗೆಯ ಪೂಕಂದಿದಡೆ ಕುಂದಿದಡೆ ಮೂಗುತಿಯ ॥

ಸಲ್ಲಲಿತ ಬೆಳಗುಟ್ಟಸೀರೆಯ ।
ಕೆಲ್ಲಶಿಖಿಸೋಂಕಿದಡೆ ನಿನ್ನವ ।
ಳಲ್ಲ ಜನಕಂಗಿಳೆಗೆ ಮಗಳಲ್ಲೆಂದಳಿಂದುಮುಖಿ ॥೧೨॥

ಅವಧರಿಸುರಾಜೇಂದ್ರ ಕೇಳ್ನಿಂ ।
ನವಳನಿರ್ಮಳ ಶುಚಿತನವನೆಂ ।
ದವನಿಸುತೆ ಬಲವಂದಳಭ್ರವ ಚುಂಬಿಸುವಶಿಖಿಯ ॥
ಭುವಿಯೊಳೀಶಂಗಜಸುರೇಶ್ವರ ।
ರವಿಗಳಿಗೆ ವಂದಿಸಿಧರಿತ್ರೀ ।
ಯುವತಿಗೆರಗುತ ಉರಿಯೊಳಗೆ ಧುಮ್ಮಿಕ್ಕಿದಳುಸೀತೆ ॥೧೩॥

ಹಾಯೆನುತ ಹಮ್ಮೈಸಿದನಾರಘು ।
ರಾಯನನುಜನುಪವನತನುಜನು ।
ಬಾಯಹೊಯ್ಕೊಳ್ಳುತ್ತ ಧೊಪ್ಪನೆಕೆಡೆದರವನಿಯಲಿ ॥
ತೋಯಜಪ್ರಿಯಸೂನುಸಹಕಪಿ ।
ನಾಯಕರು ಘೋಳಿಟ್ಟರಾಕಾ ।
ತ್ಯಾಯನಿಪ್ರಮುಖಾಮರಿಯರೊರಳಿದರು ಗಗನದಲಿ ॥೧೪॥

ಸೂಸಿದರು ಕಂಬನಿಯನಂಬರ ।
ಕೇಶವೊದಲಾದವರು ಭೋರ್ಗರೆ ।
ದಾಸುರದಶಿಖಿಧಗಧಗಿಸಿದುದು ಗಗನದಗ್ರದಲಿ ॥
ದಾಶರಥಿಯೋರಂತೆ ಚಿಂತಾ ।
ಕ್ಲೇಶಭಾರದ ಮಣಿದಶಿರದನಿ ।
ಮೇಷದೃಷ್ಟಿಯೊಳಿದ್ದನೀಕ್ಷಿಸದಾಧನಂಜಯನ ॥೧೫॥

ಕುಶನೆಕೇಳ್ ಪ್ರತಿವ್ರತೆಯರಿಗೆ ।
ವಿಷವಮೃತವಹುದುರಿಹಿಮಾನ್ವಿತ ।
ರಸವಹುದು ಬಲುಹಾವುನೇ ವಣವಹುದು ಬೆಂಬಿಡದೆ ॥

ಎಸಗಿದಪವಾದಂಗಳವುತಾ ।
ಸಸಿನವಹುದದುಸಿದ್ಧನಾಕುವ ।
ಶಿಶುವಿನವೊಲಿದ್ದಳು ವಿಪೇಹಜೆಕೈಗಳಲಿ ಶಿಖಿಯ ॥೧೬॥

ತಾಯೆಬಾರೌತಂಗಿನೀಹಿರಿ ।
ದಾಯುಸವನಸುಭವಿಸಿನಲಿಗಿಡೆ ।
ರಾಯರಂಗನೆಯರಲಿ ನೀನುತ್ತಮೆಯುಲಾ ಜಗಕೆ ॥
ವಾಯುಸಖನುದರದಲಿ ಹೊಕ್ಕಬು ।
ಜಾಯತಾಕ್ಷಿಯರುಂಟೆನಿನ್ನವೊ ।
ಲಾಯಿತೀಸರಮೇಲೆಜಗದಲಿ ಕೀರ್ತಿನಮುಗೆಂದ ॥೧೭॥

ಬಿಕ್ಕಿಬಿರಿಬಿರಿದಳುತಸತಿವೈ ।
ಯಿಕ್ಕಲವಸೀನಾಥಸೆರಗಿನ ।
ಲುಕ್ಕುವಂಬಕ ಜಲವತೊಡದಪಸವ್ಯದಂಕದಲಿ ॥
ಅಕ್ಕರಿನ ಮೋಹದಲಿ ಕಂಬನಿ ।
ಯುಕ್ಕುತಿಬ್ಬರ ಕುಳ್ಳಿರಿಸಿಚರ ।
ಣಕ್ಕೆ ನಮಿಸಿದ ಲಕ್ಷ್ಮಣನ ತೆಗೆದಪ್ಪಿದನುಭೂಪ ॥೧೮॥

ಎಡದತೊಡೆಯುಲಿ ಕುಳ್ಳಿರಿಸಿವೈ ।
ದಡವಿದನು ರಘುಪತಿಯು ಸೀತೆಯ ।
ಮುಡಿಯ ನೇವರಿಸಿದನು ಮುಂದಾಡಿದನು ಲಕ್ಷ್ಮಣನ ॥
ಬಿಡುಮಗನೆ ಚಿತ್ತದಕಳಂಕವ ।
ಹಿಡಿಯದಿರು ಸಂಶಯವಸೀತೆಯ ।
ನಡುವಳಿಗೆ ಸಂತುಷ್ಟಮಾನಸರಾದೆವಾವೆಂದ ॥೧೯॥

ಮೊರೆದವಾಗಲು ದೇವದುಂದುಭಿ ।
ಪರಿಮಳದ ಕುಸುಮಂಗಳಾಕ್ಷಣ ।
ಸುರಿದವಂಗೀಕರಿಸಿದನು ರಘುನಾಥನವನಿಜೆಯ ॥

ನರವಧುಗಳೊಳಗಾರು ಸೀತಾ ।
ಸ್ಮರಣೆಯದು ಮಾಡಲು ಪತಿವೃತೆ ।
ಯರಿಗೆ ತಾಯಿವನೆಯಹಳಲ್ಲೈಕುಶನೆ ಕೇಳೆಂದ ॥೨೦॥

ವಿಭೀಷಣನಿಗೆ ಪಟ್ಟಾಭಿಷೇಕವಾಗಿ ನಂತರ ಆತನು ಎಲ್ಲರನ್ನೂ ಊಟೋಪಚಾರದಿಂದ ತಣಿಸಿ, ಅವರವರಿಗೆ ತಕ್ಕಂತೆ ಉಡುಗರೆಯನ್ನಿತ್ತು, ! ರಾಮಸೀತೆಯರನ್ನೊಂದುಗೂಡಿಸಿದಬಳಿಕ, ರಾಮನು ಅಯೋಧ್ಯೆಗೆ ಹೊರಡ ಲನುವಾಗಲು, ವಿಭೀಷಣನು ರಾಮನ ಪರಿವಾರದವರೆಲ್ಲರಿಗೂ ಹಿಡಿಸುವಂಥ ಕುಬೇರನ ಪುಷ್ಪಕವನ್ನು ತರಿಸುವನು.

ನಿಳಯವಿದ್ದುದನಂತಸೌಧಾ ।
ವಳಿಗಳಿದ್ದವು ಲಲಿತಕಾಮಿತ ।
ಫಲ ಸಮಗ್ರದ ಬಹಳನಂದನವಿರ್ದುದೆಡೆಗೆಡೆಗೆ ।
ಜಲಭರಿತ ಕಾಸಾರವಿರ್ದುದು ।
ಲಲಿತಭೋಜ್ಯಸುವಸ್ತುಲಲನಾ ।
ವಳಿ ಮಹೌಷಧ ವಿರ್ದುದಮುವಿಮಾನಮಧ್ಯದಲಿ ॥೨೧॥

ಇಂಥ ವಿಸ್ತಾರವಾದ ವಿಶಾಲವಾದ ವಿಮಾನದಲ್ಲಿ ಎಲ್ಲರೂ ಸೇರಿ ವಿಭೀಷಣನೊಂದಿಗೆ ಹೊರಟು ಬರುವ ದಾರಿಯಲ್ಲಿ, ಭಾರದ್ವಾಜ ಮುನಿಯ ಉಪಚಾರವನ್ನು ಕೈಕೊಂಡು, ಮುಂದೆಭರತನೆಡೆಗೆ ಹನುಮನನ್ನು ಕಳಿಸಿ, ರಾಮನು ಸಕಲಪರಿವಾರದೊಂದಿಗೆ ನಂದೀಗ್ರಾಮಕ್ಕೆ ಬರುವನು. ಅಲ್ಲಿ ಜಾಂಬೂನದದ ಮೇಲೆ ಕಟ್ಟಿರುವ ಸಾಕೇತ ನಗರವು ಕಂಡಿತು. ಸಾಕೇತನಗರವೇ ಅಯೋಧ್ಯಾಪಟ್ಟಣವು. ಅಲ್ಲಿಗೆ ಬಂದು ರಾಮನು ಮೊದಲು ತನ್ನ ಮೂವರು ತಾಯಂದಿರಾದ ಕೌಸಲೆಸುಮಿತ್ರಾ ಕೈಕೆಯ ದೇವಿಯರಿಗೆ ನಮಸ್ಕರಿಸಿ, ಆಮೇಲೆ ಗುರುಗಳಾದ ವಶಿಷ್ಠವಾಮದೇವ ಜಾಬಾಲಿಗಳಂಘ್ರಿಗೆ ದರ್ಶನವನೀಡುವನು. ಆಮೇಲೆ ಶುಭ ಲಗ್ನದಲ್ಲಿ ರಾಮನಿಗೆ ಪಟ್ಟಾಭಿಷೇಕ

ವಾಗಿ ಭರತನಿಗೆ ಯುವರಾಜ ಪಟ್ಟಗಟ್ಟುವರು:— ಶತ್ರುಘ್ನನಿಗೆ ಸೇನಾಪತಿಯಾಗಿ ನೇಮಿಸುವರು.

ಈ ಪಟ್ಟಾಭಿಷೇಕ ಸಮಯದಲ್ಲಿ ಅಗಸ್ತ್ಯನೇ ಮುಖ್ಯ ಭಾಗ ವಹಿಸಿದ್ದನು. ಆ ಮೇಲೆ ಸುಗ್ರೀವ ಜಾಂಬವಂತ ವಿಭೀಷಣ ಮೊದಲಾದವರಿಗೆ ಊಟ ಉಪಚಾರದಿಂದ ದಿವ್ಯಾಭರಣ ವಸ್ತ್ರಾಲಂಕಾರಗಳಿಂದ ಉಪಚರಿಸಿ ಮರ್ಯಾದೆಯಿಂದ ಎಲ್ಲರನ್ನೂ ಅವರವರ ಸ್ಥಾನಕ್ಕೆ ಕಳಿಸುವನು. ರಾಮನು ಹನುಮಂತನನ್ನು ಮಾತ್ರ ತನ್ನ ಸಿಂಹಾಸನ ಹತ್ತರ ನಿಲ್ಲಿಸಿಕೊಂಡು ಅವನ ಸ್ವಾಮಿಭಕ್ತಿ ಮೊದಲಾದ ಗುಣಗಳನ್ನು ಕುರಿತು ರಾಮನು ಹೊಗಳುವನು. ಹನುಮನು ಆಳ್ದನ (ರಾಮನ) ಭುಕ್ತಶೇಷದಕನಕಪಾತ್ರೆಯನ್ನು ಕೊಂಡು ಗಗನಮಾರ್ಗವಾಗಿ ಹಾರಿ ಆಪ್ರಸಾದಾವಂಭುಂಜಿಸಿ ಬರುವನು.

ಅತಿಥಿಗಳನ್ನು ಕಳಿಸುವಾಗ ರಾಮನ ವಿನಯ ವಚನಗಳಿವು:—

ಬಳಲಿದಿರಿ ನಿಮ್ಮಿಂದ ಹಗೆಯನು ।
ಗೆಲಿದೆವಾವ್‌ನಿಮ್ಮಿಂದ ಕೀರ್ತಿಯ ।
ಫಳಿಸಿದೆವು ನಿಮ್ಮಿಂದ ಜಗದೊಳಗಧಿಕರಾರೆಂದ ।

ಹೀಗೆ ವಿನಯಾನ್ವಿತ ವಚನಗಳಿಂದ ಅವರಂಬೀಳ್ಕೊಟ್ಟು ರಾಮನು ಸುಖದಿಂದ ರಾಜ್ಯವಾಳಿದನು.

ಕುಬೇರನ ಪುಷ್ಪಕದವರ್ಣನೆಯು ಮೇಲುದಾಹರಿಸಿದೆ. ಆದರೆ ಪಾಶ್ಚಾತ್ಯ ದೇಶದಲ್ಲಿ ಈಗ ಯುದ್ಧಕ್ಕಾಗಿ ವಿಮಾನ ಸಿದ್ಧಗೊಳಿಸುವರು. ಮತ್ತು ಪ್ರಯಾಣಿಕರ ಸಲುವಾಗಿ ಅಂಚೆ ಒಯ್ಯುವದರ ಸಲುವಾಗಿ ಸಹ ಉಪಯೋಗಿಸುವರು. ಈ ವಿಮಾನದ ವಿಸ್ತಾರದ ಬಗ್ಗೆ ಪೋಲಂಡದ ಎಂಜಿನೀಯರು ರಚಿಸಿದ ಒಂದು ದೊಡ್ಡ ವಿಮಾನದ ವರ್ಣನೆಯು

**Sunday Hindu Paper dated 9-10-1938**ದಲ್ಲಿ ಪ್ರಸಿದ್ಧವಾದದ್ದನ್ನು ಇದರಡಿ ಇಳಿಸಿದೆ.

## WORLD'S LARGEST BALLOON

The biggest balloon ever made is shortly to go up. Constructed by Polish engineers, aviators and scientists, the balloon exceeds 4,800,000 cubic feet in volume, has a maximum diameter of 209 feet and will be 459 feet high when it takes off. The flyers who will man the aluminium and steel gondola intend to explore the stratosphere and hope to discover more about cosmic rays. The flight starts from a Spot near the Tatry mountains, in south-western Poland, not far from the Czechoslovakian border.

ಇದರ ಅರ್ಥ–**ಜಗತ್ತಿನಲ್ಲಿ ಅತಿ ದೊಡ್ಡ ವಿಮಾನವು ಕೂಡಲೆ ಮೇಲಕ್ಕೆ ಹಾರಿಸಲ್ಪಡುವದು.** ಇದನ್ನು ಪೋಲಂದ ಶಾಸ್ತ್ರಜ್ಞರು ಎಂಜಿನೀಯರು ರಚಿಸಿರುವರು. ಇದರ ವಿಸ್ತಾರವು ೪,೮೦೦,೦೦೦ ಘನಪೂಟು ಇದ್ದು-ಇದರ ಮಧ್ಯರೇಖೆಯು (ವ್ಯಾಸವು) ಸರಾಸರಿ ೨೦೯ ಪೂಟು ಅದೆ. ಇದರ ಎತ್ತರ ಸರಾಸರಿ ೪೫೯ ಪೂಟು ಇರುವದು. ಇದರ ಚಾಲಕರು ಇದರಕೂಡಇದ್ದ ಅಲ್ಯುಮಿನಿಯಮ್ಮು ಮತ್ತು ಉಕ್ಕಿನ ದೋಣಿಯಿಂದ ಶಿಲೆಯಥರವನ್ನು ಮತ್ತು ವಿಶ್ವಸಂಬಂಧವ ರಸ್ಮಿಗಳನ್ನು ಗೊತ್ತು ಹಚ್ಚಲು ಇಚ್ಛಿಸಿರುವರು. ಇದನ್ನು ಜೆಕೊಸ್ಲಾವೋಕಿಯಾದ ಗಡಿಗೆ ದೂರಲ್ಲದ ಪೋಲಂಡ ಪ್ರಾಂತದ ನೈರುತ್ಯ ಮೂಲೆಯಲ್ಲಿರುವ ಟಟ್ರಿ ಪರ್ವತಸವಿಾಪದ ಸ್ಥಳದಿಂದ ಮೇಲಕ್ಕೆಹಾರಿ ಸಲಿಚ್ಛಿಸುವರು.

# ತೊರವೆರಾಮಾಯಣ ಸಾರಸಂಗ್ರಹ

# ಕಠಿಣಶಬ್ದಗಳ ಅರ್ಥ:—



[ತೊರವೆ ರಾಮಾಯಣ ಗ್ರಂಥವು ನನ್ನ ೧೯೧೦ರಲ್ಲಿ ಮೈಸೂರ ಕ್ರಾವುನ್ ಪ್ರೆಸ್ಸಿನಲ್ಲಿ ಬಿ. ಎ. ವೆಂಕಟಾಚಲಂಶೆಟ್ಟರು ಮುದ್ರಿಸಿ ಪ್ರಸಿದ್ಧ ಮಾಡಿದ ಪ್ರತಿಯು ನನ್ನಲ್ಲಿದ್ದು, ಅದರ ಸಹಾಯದಿಂದ ಈ ಚಿಕ್ಕ ಪ್ರಬಂಧ ವನ್ನು ಬರೆದುದಾಗಿದೆ. ಈ ಮೂಲಗ್ರಂಥದಲ್ಲಿ ಮುದ್ರಣದೋಷದಿಂದಲೋ ಅಥವಾ ಇನ್ನಾವಕಾರಣದಿಂದಲೋ ತಪ್ಪುಗಳು ಅಲ್ಲಲ್ಲಿ ಕಂಡು ಬರುತ್ತವೆ. ಈ ತಪ್ಪುಗಳನ್ನು ಸರಿಪಡಿಸಬೇಕೆಂದು ಬೇರೆ ಪ್ರತಿಗಳನ್ನು ಹುಡುಕಿದರೂ ನನಗೆ ದೊರೆಯಲಿಲ್ಲ. ಕಾರಣ ನನ್ನ ಅಲ್ಪ ಬುದ್ಧಿಗನುಸರಿಸಿ ಸಂದರ್ಭಕ್ಕೆ ಸರಿಯಾಗುವಂತೆ ನಾನೇ ಕೆಲವೆಡೆಗಳಲ್ಲಿ ಪಾಠಗಳನ್ನು ತಿದ್ದಿರುವೆನು. ಇವು ಸಮವೆಂದು ನಾನು ಎದೆತಟ್ಟಿ ಹೇಳಲಾರೆ. ಆದರೂ ಓದುಗರು ನನ್ನ ಚಿಕ್ಕ ಪುಸ್ತಕವನ್ನೋದಿ ಪಾಠಗಳು ತಪ್ಪಿದ್ದು ನನಗೆ ತಿಳಿಸಿದಲ್ಲಿ ಅವರುಪಕಾರವಂ ಸ್ಮರಿಸಿ, ಮುಂದಣ ಆವೃತ್ತಿಯಲ್ಲಿ ಅವನ್ನು ಸರಿಪಡಿಸಲಾಗುವದು. ನನಗೆ ತೋಚಿದಂತೆಯೇ ಪಾಠಗಳನ್ನು ತಿದ್ದಿ ಅವುಗಳ ಅರ್ಥವನ್ನು ಬಿಡಿಸಿದೆ. ಇದರಲ್ಲಿಯೂ ತಪ್ಪಿರಬಹುದು. ಉದಾರಹೃದಯರು ಅವನ್ನು ತಿದ್ದಿಕೊಂಡು ಓದಬೇಕೆಂದು ಈ ಸಂಗ್ರಾಹಕನ ಬೇಡಿಕೆ. ಎರಡು ಸಾವಿರ ವರುಷಗಳಿಂದಲೂ ಬಲವಾದ ಬೇಲಿಯನ್ನು ಇಟ್ಟು, ಸಾರವಾದ ಬೀಜಗಳನ್ನು ಬಿತ್ತಿ ಬೆಳಸಿ ಪ್ರೌಢಿಗೆತಂದ, ಜೈನ, ವೀರಶೈವ, ಬ್ರಾಹ್ಮಣ ಮೊದಲಾದ ಕವಿವರ್ಯರ ನಂದನವನದಂತಿರುವ ಕನ್ನಡ ವಾಙ್ಮಯದಲ್ಲಿ, ಕೆಲವು ಸದ್ವಾಸನೆಯ ಪುಷ್ಪ ಗಳನಾಯ್ದು ಕರ್ಣಾಟಕ ವಾಚಕವೃಂದಕ್ಕರ್ಪಿಸಿರುವೆನು. ಹೂಗಳು ಹಳೆ ಯವಾದರೂ ಮುಂಜಾನೆಯ ವೇಳೆಯಲ್ಲರಳಿದವುಗಳಂತೆ ಸುಗಂಧವನ್ನೀಯು ವವು. ಕನ್ನಡ ವಾಙ್ಮಯವನ್ನು ಕಣ್ದೆರೆದು ನೋಡಬೇಕೆಂಬ ಸದಿಚ್ಛೆ ಯಿಂದ ಈ ಪ್ರಬಂಧವನ್ನು ರಚಿಸಲಾಗಿದೆ. ಸಂಗ್ರಾಹಕ]

# ೧ನೆಯ ಪಾಠ

(೧) ಅನುಜ್ಞೆ = ಅಪ್ಪಣೆ, ಗೋಚರಿಸುವೆನು = ವನವಾಸದ ಅವಧಿಯು ತೀರಿದನಂತರ ನಿಮ್ಮನ್ನು ಕಾಣುವೆನು. (೨) ನೆರವಿಗರ = ಗುಂಪನ್ನು, (೩) ಅಸುರಕರ್ಮ = ತಂದೆಯ ಮಾತಿನವಿರುದ್ಧ ಹೋಗುವದು ಕೆಟ್ಟಕೆಲಸ. ಉನ್ಮ್ಮಳಿಸುವರು = ತಳಮಳಗೊಳ್ಳುವರು, ಎಮ್ಮರಾಯರು = ಸ್ವರ್ಗದಲ್ಲಿದ್ದ ನಮ್ಮ ಪಿತೃಗಳು, ಪಿತನ ಸೊಮ್ಮನಳಿದರೆ = ತಂದೆಯ ವಿಶಿಷ್ಟ ಕೋರಿಕೆಯೆಂಬ ಧನವನ್ನು ನಾವುಹಾಳು ಮಾಡಿದರೆ ಅಂದರೆ ಅದರ ವಿರುದ್ಧನಡೆದು ಹಾಳುಮಾಡಿದರೆ. (೪) ಸೂನೃತವಾದಿ = ಸತ್ಯ ಹೇಳುವವ ಅಪದೆಶೆ = ಅಪಕೀರ್ತಿ, (೫) ಅನೃತಕೆ = ಸುಳ್ಳಿನಸಲುವಾಗಿ, ಅತಿಗಳೆದು = ಧಿಃಕ್ಕರಿಸಿ, ಮೇಲೆಕಾಂಬ = ಮುಂದೆ ನಮಗೆ ಸಲ್ಲತಕ್ಕ ಸದ್ಗತಿ (೬) ಸಹಭವನ = ಒಡ ಹುಟ್ಟಿದ ತಮ್ಮ, ಅಣುಗ = ಮಗ–ಮಗನಸ್ವರೂಪನಾದವ, ಸಂದಿಹುದು = ಹೊಂದಿಕೊಂಡಿರುವದು. (೭) ರಾಜೀವ= ಕಮಲ, ಓಲಗ = ಸೇವೆ, ವಲ್ಕಲ = ನಾರುಬಟ್ಟೆ (೮) ನಾವೈಸಲೆ = ನಾವಷ್ಟೇ ಓರಿದು = ನಮ್ಮ ಕೂಡವನವಾಸಕ್ಕೆ ಬರಬೇಕೆಂಬ ಆಗ್ರಹವಿದ್ದಲ್ಲಿ, ಬೀಳ್ಕೊಳು = ಅಪ್ಪಣೆಹೊಂದಿಬಾ, (೯) ಭಾಳವ = ಹಣೆಯನ್ನು. (೧೦) ರುಚಿ = ಪ್ರಕಾಶ (೧೧) ಆಡುವರು = ಆಡಿಕೊಳ್ಳುವರು, ಅವನಿಜೆ = ಭೂಮಿಯ ಮಗಳು ಸೀತೆ ಬಂದವಳೆಂದನವನಿಜೆಯು = ತನ್ನೆಡಗೆ ಬಂದು ಕೇಳಿದ ಸೀತೆಯಂ ಕುರಿತು, ಎಂದಂ = ಅಂದನು, (೧೨) ಸ್ತರಣ = ಹಾಸಿಗೆ, ಪರಿಯಂಕ = ಮಂಚ, ವಿಹಡೆ+ಇಲ್ಲಿ+ಅಲ್ಲ = ಅರಣ್ಯದಲ್ಲಿರುವದಾದರೆ ಇಲ್ಲ ಅಲ್ಲಿ, ಮಣಿಭವನ = ಅರಮನೆ, ದೀವಸಿಕೆಗೆ = ಧೈರ್ಯಕ್ಕೆ, (೧೪) ಸವನಿಸಿತೆ = ಬಂತೆ, ಪರಿಭ್ರಮಣ = ಸಂಚಾರ, ಯಾಯಸಕೆ = ಆಯಾಸ, ಸಂದೌ = ಬಂತೆ, ಉಣ್ಣದೆ = ಅರಮನೆಯಲ್ಲಿದ್ದು ಸುಖದಿಂದ ಉಂಡುಕೊಂಡಿರದೆ, (೧೫) ಸುರಗಿ = ಕತ್ತಿ, ಕಟಿಯಲಿ = ನಡಕ್ಕೆ, ಚಾಪಮಾರ್ಗಣ = ಧನಸ್ಸು ಮತ್ತು ಬಾಣ, ವೈದೇಹಿ = ಸೀತೆ (೧೬)

ಬೀಳ್ಕೊಡೆ = ಅಪ್ಪಣೆ ಕೇಳಲು, ಬಗೆ = ತಿಳಿ, (೧೮) ಕಲ್ಪಪಾದಪ = ಕಲ್ಪತರು, ಹರುಷನಿರ್ಝರ = ಆನಂದವೆಂಬಹೊಳೆಯು, ಧೇನು = ಕಾಮಧೆನು, (೧೯) ಯಷ್ಟಿ = ಬಡಿಗೆ, ಕೌಳಿಕವ = ಕಟುಕರವನಾಗಿ ಮೋಸ = ಠಕ್ಕತನ, ವಿಧಾತ್ರನು = ಬ್ರಹ್ಮನು, (೨೦) ಇಭಕಳಭ= ಚಿಟ್ಟಾನೆ, ಹರಿಪೋತ = ಸಿಂಹನ ಮರಿ ಕಳಲಿಸಿದ = ಸಡಿಲಾದ, ಕಂ-ಬನಿದುಡುಕೆ = ಕಣ್ಣೀರು ಒತ್ತರಿಸಿಬರಲು, ಕೆಲಬಲಕೆ = ಎಡಬಲಕ್ಕೆ, ಅಳವಳಿವುತ = ಶಕ್ತಿಗುಂದುತ್ತ, ಒರಲಿದಳು = ಅತ್ತಳು, (೨೧) ಬರು ದೊರೆಯಾಯಿತೇ = ಬರೇದಾಯಿತೇ–ವ್ಯರ್ಥವಾಯಿತೇ (೨೨) ನಿನ್ನರಿ-ತಕೆ = ನಿನ್ನ ಬುದ್ಧಿಗೆ–ಜ್ಞಾನಿಯಾದ ನಿನಗೆ, (೨೩) ಕಂಧರ = ಕುತ್ತಿಗೆ.

## ೨ನೆಯ ಪಾಠ.

(೧) ನೂಕಿದರು = ಕಳೆದರು, (೨) ಅಡಗಿದ = ತೀರಿ–ಕೊಂಡ, ಸಂದಿಸುವರೆ = ಕೊಡಬಲ್ಲರೆ, (೩) ಅನುನಯೋಕ್ತಿಯಲಿ = ನೀತಿ ಯಮಾತಿನಿಂದ, (೫) ಮೀರಲಾಪೆನು = ಮೀರಲಾರೆನು, ಅವನೀಹಮ್ಮೈಕಾರರು = ಈ ರಾಜ್ಯವನ್ನು ವಿಸ್ತಾರಗೊಳಿಸಿದವರು, ನೆಮ್ಮಿದವರು = ಆಶ್ರಯಿಸಿದವರು, (೬) ಕಲುಷ = ತಪ್ಪುವಿಚಾರವೆಂಬಹೊಲಸನ್ನು, ಕೆಲಚಾಚಿ = ಕಳೆದು, – ದೂರಮಾಡಿ (೭) ಅನಲಂಗೆ = ಬೆಂಕಿಗೆ,–ಉರಿಗೆ, ನಿವೇದಿಸು = ಅರ್ಪಿಸು

## ೩ನೆಯ ಪಾಠ.

(೧) ಜರೆಯ ಜರುಗಿದ = ಮುಪ್ಪಿನಿಂದಬಾಗಿದ, (೨) ದಿ–ಲೀಪಾನ್ವಯನ = ದಿಲೀಪರಾಜವಂಶದಲ್ಲಿ ಹುಟ್ಟಿದವನ, ಮುದದತುದಿಯಲಿ = ಸುಖದನಂತರ, ಆಪದದ = ದುಃಖದ, ಅಘಹೃದಯನು = ಪಾಪದಿಂದ

ತುಂಬಿದಹೃದಯವುಳ್ಳವನು, (೩) ಪರಿಯರಿಯದ = ಅವನರೀತಿ—ಇಂಗಿತವನ್ನು ತಿಳಿಯದ, (೫) ದೇಶವತೊಳಲಿದೆವು = ಅನೇಕದೇಶಗಳನ್ನು ಆಯಾಸಬಟ್ಟು ತಿರುಗಾಡಿದೆವು, (೬) ಸುಮನಸರು = ದೇವತೆಗಳು, ಸ್ವರ್ಗವಾಸಿಗಳು, ಸಮನಿಸೆ = ಪ್ರಾಪ್ತವಾದರೆ, (೭) ಯೋಗದಜಿನುಗಲಿ = ಚಿತ್ತೈಕಾಗ್ರತೆಗಾಗಿ ಯಾರಿಗೂ ಕೇಳಿಸದಂತೆ ಆಡುವಶಬ್ದಧ್ವನಿಯೂ, ಜಾಡ್ಯತನ = ಮಂದತನ ಅಂದರೆ ನಾಲಿಗೆಯ ಜಪಬಂದಾಯಿತು, (೮) ಮಿಡುಕು = ಕಮಂಡಲದ ಚಲನೆಯು, ಜಾಡ್ಯದತೊಡರು = ಮುಪ್ಪಿನವೇಷದ ತೊಡಕು, ಹರಿದು = ಹೋಗಿ, (೯) ಹರಹು = ವಿಸ್ತಾರವು—ಹೆಚ್ಚುವಿಕೆ, (೧೦) ನಿಭಾನನೆ = ಚಂದ್ರಮಂಡಲವನ್ನು ಹೋಲುವಮುಖವುಳ್ಳ, ಸಿಂಧುರ = ಆನೆ ಮೃಗದೆ+ಆಳಿದನು = ಮೃಗದಳಿದನು, (೧೧) ಉಬ್ಬುಗೊಬ್ಬಿನ = ಅತಿಶಯಗರ್ವದ, (೧೨) ಭುವನಾವಳಿಗಳು = ಜಗತ್ತಿನ ಸಾಲುಗಳು—ಸರ್ವಜಗತ್ತು, ಒಳಗುಗೊಟ್ಟಿಹವು = ನನ್ನ ಕೈವಶವಾಗಿ ನಾಹೇಳಿದಂತೆಮಾಡುವವು, (೧೩) ಉದ್ದಂಡ = ಜಗತ್ತಿನಲ್ಲಿಅತಿಪರಾಕ್ರಮಶಾಲಿಯು, ಗುಂಡಶೌರ್ಯನ = ಸಂಪೂರ್ಣಶೂರನ, ದಂಡಿಯುಳ್ಳವನೇ = ಕ್ರೂರನಾಗುವನೇ, (೧೪) ಸಂಕರದಸಂಶಯ = ನೀನುಕ್ಷತ್ರಿಯಳು ನಾನು ರಾಕ್ಷಸವಂಶೀಯನೆಂಬ ಸಂಶಯ, (೧೫) ಅಗ್ಗಳೆಯ ದೈವವಕೆಣಕೆ = ಅತಿಪರಾಕ್ರಮಿಯಾದರಾಮನೆಂಬ ದೇವಶ್ರೇಷ್ಠನನ್ನು ಮೂರ್ಖತನದಿಂದ ಕೆಣಕಿದೆಯಾದ್ದರಿಂದ, ಕಾಲಕೆದರಿ ಜಗಳ ತೆಗೆದೆಯಾದ್ದರಿಂದ, ನೀರಲಿಸೆರವೆ = ನೀರಿನಲ್ಲಿ ಹೋಮಮಾಡಿದಂತೆ ವ್ಯರ್ಥಮಾಡಿದೆ, ಕಬರಿ = ತುರುಬು, (೧೬) ವೀಡು = ಹಿಂಡು, (೧೭) ಉಲಿವುತಿದೆ = ಮೇಲೆಬರುತ್ತಿದೆ, (೧೮) ಖಳನ ... ಭೀಮ= ರಾಕ್ಷಸಕುಲಕ್ಕೆ ಕಾಮನೆಂದು ಹೇಳಿಕೊಳ್ಳುವ ಈರಾವಣನಿಗೆ ಭಯಂಕರನಾದವನೆ, ಸ್ವಾಮಸಂಭವ = ಆನೆ, ಸಂದಳಿಸ = ಚನ್ನಾಗಿಶೀಳುವಂಥ, ಕಂಠೀರವ = ಸಿಂಹ, (೧೯) ಮೇಲ = ಇದೂಅಲ್ಲದೆ ಮತ್ತೆ. ಕೊರತೆಗಳ= ಬೇಕಾಗಿರುವದನು ಉರ್ಮಿಳಾವರಲೋಲ= ಲಕ್ಷ್ಮಣನು, (೨೦) ಜರದು= ಸಿಟ್ಟುಮಾಡಿ, ಕಲುಬುತನ = ಮನದಲ್ಲಿ ಹೊಲಸುಮಾಡಿಕೊಳ್ಳುವದು, ಎರೆಯ = ಯಜ—

ಮಾನ ಹಿರಿಯನು, (೨೧) ಕುಂಭಿಣಿ = ಭೂಮಿ, (೨೨) ಮಾನ್ಯರ-
ಲಿ = ಸಜ್ಜನರೊಡನೆ, ·ಹರಿ = ಸಿಂಹ-ಹುಲಿ-ನಾಯಿ, ಕ್ರೋಡ = ಹಂದಿ
ಎಕ್ಕಲ. ಖಡ್ಗಿ = ಗೇಂಡಾಮೃಗ-ಗಂಡಕ- ಕುರಂಗಿ = ಹೆಣ್ಣು ಎರಳೆ,
ನಳಿರ = ಕಮಲ, (೨೩) ಅಸವಳಿಸಿ = ಮಾನಭಂಗಮಾಡಿ, (೨೪)
ಮೈಥಿಲಿಯ = ಸೀತೆಯ, ಕಮಲಜನುಸುರುಹನ್ನಬರ = ಬ್ರಹ್ಮನುಇರುವ
ವರೆಗೂ, (೨೫) ಖಡುಗದಮೇಲೆ ಬಹರಾವೈಸೆ = ನಾವು ಕತ್ತಿ ಹಿಡಿದು
ಕೊಂಡು ಬಡಮಾಡುವವರು, ಕೋಳುಹೋಗಲಿಕೀರ್ತಿ = ಕೀರ್ತಿ ಹಾಳಾಗಲಿ-
ಇಲ್ಲದಾಗಲಿ, ಎರಗಿದು = ಬಾಣದಿಂದ ಹೊಡೆದನು.

## ೪ನೇಯ ಪಾಠ

(೨) ಮಾರುಮಾತು = ಉತ್ತರ, (೪) ಅಮುಂದನು = ಕೂ
ಡಿಕೊಂಡನು, (೫) ಅಸ್ಖಲಿತ = ತಡೆಯಿಲ್ಲದ,-ಸಂಪೂರ್ಣ, (೬) ಅಹಿ
ಮಕರ = ಸೂರ್ಯ, (೮) ದ್ವಿಪ = ಆನೆ, ದಿಧೀತಿ = ಪ್ರಕಾಶ, ಇನ =
ಸೂರ್ಯ, ವನಜ = ಕಮಲ, ಪರವಾಹಿನಿಗಳು = ಬೇರೆಬೇರೆ ನದಿಗಳು,
ಇಲ್ಲದ = ಕೂಡದೆ ಇದ್ದ, ವಾರ್ಧಿ = ಸಮುದ್ರ, (೯) ಲಲಿತನಿನದೆಯ =
ಮನೋಹರವಾದ ಧ್ವನಿಯುಳ್ಳ, ಕೀರ= ಗಿಳಿ, ಹರ್ಯಕ್ಷ = ಸಿಂಹ, (೧೧)
ಆಮೋದಬಾರಾಕಲಿತ = ಸುವಾಸನೆಯ ಗಾಳಿಯಿಂದ ಕೂಡಿದ, ಲಲಿತಸ್ಮಿತ =
ಮನೋಹರವಾದ ಮಂದಹಾಸದಿಂದ ಕೂಡಿದ, ಸುಧಾರಸ, =ಅಮೃತರಸ,
ವಿಲುಲಿತ = ಬೀಳುವ ಕಡೆನೋಟ. (೧೨) ಸಮುದ್ರವಸನಾ = ಸಮುದ್ರ
ವೆಂಬ ವಸ್ತ್ರದಿಂದ ಸುತ್ತಿಕೊಂಡ ಭೂಮಿಯ, ಧಾತುಗೆಡಿಸು = ಧೈರ್ಯ
ಗುಂದಿಸು. (೧೩) ಪುರಹೂತ = ಇಂದ್ರ, ಪೂರ್ವದಿಕ್ಕು. (೧೪) ತರ
ಣಿಯಲ್ಲೆಲೆ = ನೀನು ಸೂರ್ಯನಲ್ಲವೋ, ಚಟುಲತರ ಚಂಡಾಂಶು = ತೀ
ಕ್ಷ್ಣವಾದ ಬಿಸಿ ಕಿರಣಗಳು, ಅಪಸರಣೆ = ಕ್ಷಮೆ, excuse, apology,
(೧೫) ನೆತ್ತಿಯನೊದೆವ = ಶಿರವನ್ನು ಕತ್ತರಿಸುವ, ಕುಂತದುರಂತ =
ದುಷ್ಟರನ್ನು ಕೊಲ್ಲುವಂಥ ಕತ್ತಿಯು.

# ೫ನೆಯ ಪಾಠ

(೧) ನೀರೆಯರು = ನಾರಿಯರು, ಅಂದದ = ಈತನಂಥ, ಈತನಹಾಗೆ, ನಳಿನಭವ = ಬ್ರಹ್ಮ, (೨) ವಿಭುತ್ವ = ಪ್ರಭುತನ,–ಒಡೆತನ. (೩) ಅಂತಸ್ಥ = ಮನಸ್ಸಿನಲ್ಲಿರುವದು, ಹದನ + ಏನು = ಉಪಾಯವೇನು? ಏನುಮಾಡತಕ್ಕದ್ದು. (೪) ದಲೋಕ ಜೋಡಿಕೆಯ = ಲೋಕದಲ್ಲಿ ಉಳಿದ ಸ್ತ್ರೀಪುರುಷರ ಸಂಬಂಧವಾಗಿ ಏನು ಹೇಳುವದು ? ಖೋಡಿಗಳು = ದುಷ್ಟರು, ಕೆಟ್ಟವರು, ಒಂದು ಓಜೆ = ಪ್ರಕಾಶದ ಒಂದು ಗಟ್ಟಿ–ಅವರುಗಳ ಅವತಾರಮೂರ್ತಿ. ಖಂಡಪರಶು = ಶಿವ. (೬) ಆಗುಳಿಕೆ = ಆಕಳಿಗೆ, ಸೀಸಿನಲಿ = ಶೀತಾಗನಹ, ತಾಗು + ಎಡಹು = ಸುಖದುಃಖ. (೭) ಈವುದದು + ಹುಸಿ = ಯಾರುಬಂದರೂ ನಿನ್ನನ್ನು ಒಯ್ಯುವದು ಸುಳ್ಳು–ಒಯ್ಯಲಾರರು, ಸರಘುಮಾಡು = (೧) ಆದರಮಾಡು, (೨) ಹಿಂದಕ್ಕೆ ಸರಿ, ಕಾಳಾಗು = ಕೆಟ್ಟವಳಾಗು. (೮) ನಳಕೂಬರ ಜಯಂತಕರು = ಆ ಹೆಸರಿನ ಅರಸರು. (೧೦) ಹೆಣದಿಸಿಹಿಗಳು = ಸತ್ತದ್ದು ತಿನ್ನುವವರು. (೧೧) ಉರಿಮಸಗಿತು = ಕೋಪಾಗ್ನಿ ಬಲಿಯಿತು. (೧೨) ದಂದ= ಅಂತ, ಹಾಗೆ, ಮಂದಿವಾಳದ ಮಾತು = ಸೊಕ್ಕಿನಮಾತು – ಸಲಿಗೆಯ ಮಾತು, ಉರುಬಿದಳು = ಶಿಟ್ಟಿನಿಂದ ನೋಡಿದಳು. (೧೩) ವನಜಭವ = ಬ್ರಹ್ಮ, ಭವ = ಶಿವ. (೧೪) ದುರ್ಬೇಧರಳಿದವರಿಗೆ = ತಾರತಮ್ಯ ಜ್ಞಾನವು ಯಾರಿಗೆ ಅತ್ಯಂತ ದುಸ್ಸಾಧ್ಯವೋ. (೧೫) ಕಾಳ್ಗೆಡೆದುನುಡಿವರು = ಬೈದು ಮಾತಾಡುವವರು, ಕಡಿದರೆಯ ತಾಮೆಟ್ಟಿಮಿಾವಳು = ತನ್ನನ್ನು ಕೊಂದವರನ್ನು ಕೊಂದು ಸ್ನಾನದಿಂದ ಶುದ್ಧಳಾಗುವಳು, ಉಗ್ಗಡದ = ಹೆಚ್ಚಿನ, ಅಧಿಕವಾದ, ಖಂಡೆಯವ = ಖಡ್ಗವನ್ನು. (೧೭) ಕೈದುಡುಕಿ = ಕೈಯನ್ನು ಮುಂದೆ ಮಾಡಿ ಹಿಡಿದು, ಕೆಡುಹಕೆ + ಅಳಲಿಸಿ = ಕೇಡು ಮಾಡುವದನ್ನು ನಿಲ್ಲಿಸಿ – ತಡೆದು, ಕಿಡಿಗೆದರಿ = ಶಿಟ್ಟಾಗಿ, ಅಂತರಿಸಿದನು = ಅಡ್ಡಿಮಾಡಿದನು. (೧೯) ತಿಣ್ಣವನು ತಿದ್ದಲಿಕೆ = ಭೂಮಿಯ ಭಾರವನ್ನು ಸರಿಮಾಡಲಿಕ್ಕೆ, ರೂಹಿಸಿದ

= ರೂಪ ಧರಿಸಿದನು, ಉಣ್ಣದೆ = ಮುಂದಾಗುವ ಕೆಡಕನ್ನು ಅನುಭೋಗಿ ನದೆ, ಉರಿಯಲುಬೇಡ = ಆಗ್ರಹಬೇಡ,- ಹಟಹಿಡಿದು ನಾಶವಾಗಬೇಡ, (೨೦) ಈ ಮದೋನ್ಮತ್ತರುಗಳುಬ್ಬಿದರೆ = ಕಾಮುಮದದಿಂದ ಗರ್ವಿಷ್ಠ ರಾದವರು ಉಬ್ಬಿದರೂ ನೀ ಮಾತ್ರ ಹಾಗೆ ಮಾಡಬೇಡ ಕಕುಸ್ಥಜ = ಕಕುಸ್ಥರಾಜವಂಶದಲ್ಲಿ ಹುಟ್ಟಿದ ರಾಮನು, ವನೌಕಸರು = ಮಂಗಗಳು, ಬೀಸುವಲೆ = ದೊಡ್ಡ ಬಲೆ (೨೧) ಪೌಲಸ್ತ್ಯಜ = ಕುಬೇರನ ಮಗ, ನರಹಾರಿಯೇ = ಮಾನವಳೇ, (೨೪) ಖರಸೂದನ = ಖರವೈರಿ = ರಾಮ, ಹಳುದವಲಿಬೀದಿವರಿವುದು= ಕಾಡಿನಲ್ಲಿ ನಿನ್ನ ತಲೆಗಳು ಸಾಲಾಗಿ ಉರುಳುವವು (೨೫) ಚಂದ್ರಹಾಸಕ = ಖಡ್ಗ—ಕತ್ತಿ, ಕಣೆ = ಶುಭ.

## ೬ನೆಯ ಪಾಠ

(೨) ಗತಿಯ ಗಾಢಿಕೆಯೊ = ಮುಂದಾಗುವ ಭಯಂಕರ ಪರಿಣಾಮವೋ- (೩) ಬಂಧನದ+ಆಯತ = ದೊಡ್ಡ ಬಿಕ್ಕಟ್ಟು—ಹೆಚ್ಚಿನ ಬಂಧನ, (೪) ಪೋವದೆ = ರಕ್ಷಿಸದೆ, (೫) ನಯ = ಪದ್ಧತಿ Policy, ಹಗರಣದ = ವ್ಯರ್ಥಮಾತಿನ, (೬) ಇನತನೂಭವ = ಸೂರ್ಯನ- ಮಗ ಸುಗ್ರೀವ, (೯) ವಿಷ್ಟರದಕೆಲದಲಿ = ಸಿಂಹಾಸನದ ಸಮೀಪಕ್ಕೆ ಹುದುಳಿಗ = ಕ್ಷೇಮದಿಂದಿರುವನು, (೧೦) ಅಗ್ಗ್ಯಸು = ಶ್ರೇಷ್ಠನು, ಸಂಯುಗ = ಕಾಳಗ, ನಗಸುತಾವರ = ಹಿಮವತ್ಪರ್ವತದ ಮಗಳಾದ ಪಾರ್ವತಿಯ ಗಂಡ – ಶಿವ, (೧೧) ದೌಹಿತ್ರ = ಮೊಮ್ಮಕ್ಕಳು, (೧೨) ಪರ = ಶತ್ರು, ಕಳೇವರ = ಶರೀರ, ರುಜೆ = ರೋಗ, (೧೩) ಚಮೂರು = ಚಿಗರಿ,—ಹುಲಿ (೧೪) ಕೇಳಮೇಳ = ಆಟದಗುಂಪು—ಸಹ ವಾಸ—ಸಗಾಟಕೆ, (೧೫) ಅಘಸಂದಷ್ಟ = ಪಾಪಕಚ್ಚಿದ—ಪಾಪಿಷ್ಟನಾದ, ಉದಿಸಲುಳ್ಳೊಡೆ = ಅಣ್ಣನಾದರಾವಣನಿಗೆಹುಟ್ಟಿ ಜೀವಿಸುವ ಇಚ್ಛೆ ಇದ್ದರೆ. ಹದನ = ರೀತಿ—ಉಪಾಯ, (೧೬) ಪಾವಮಾನಜ = ವಾಯುಪುತ್ರ—

ಹನುಮಂತ ರವಿಜ = ಸುಗ್ರೀವ, (೧೭) ಕೋಳುಗೊಡುವೆನು = ಅಯೋಧ್ಯಾ ನಗರವನ್ನು ವಿಭೀಷಣನಸ್ವಾಧೀನ ಮಾಡುವೆನು = ಕಮಲಜನ = ಬ್ರಹ್ಮನ,

## ೭ನೆಯ ಪಾಠ

(೧) ದಾರುಣ = ಕ್ರೂರತನ, (೨) ಅಂಡಲೆದೆ = ತ್ರಾಸು ಕೊಟ್ಟೆ, ಸಮಗ್ರದ ಕೇಡನು = ಪೂರ್ಣನಾಶ, (೫) ಜಂಭಾರಿಜಿತು = ಇಂದ್ರನನ್ನುಗೆದ್ದವನು, ಕಳೆಯಲಿ = ಜ್ಞಾನಸಾಮಾನ್ಯದಲ್ಲಿ (೭) ನೀಡು = ಅಗಲಾಗಿ, ಮಾಯಾ ಜೋಡಣೆಯ =ಮಾಯಾ ರಚನೆಯಿಂದಾದ, (೯) ನಿಮಿಕುಲ = ಸೂರ್ಯಕುಲ, ಜುಗುಪ್ಸೆಯ = ಅಸಹ್ಯಕರವಾದ, ಛಲೋಕ್ತಿಯನಗಲಿಸಿದೆ = ಹಟತೊಟ್ಟಂತೆ ಮಾಡಲಿಲ್ಲೆಂಬ, ಬಿಗುಹು = ಗಟ್ಟಿತನ,–ಸೊಕ್ಕು, ತಗಡುತನ = ಬಿರುಸು, (reticence) (೧೨) ಅನುವರಿದು = ಸಂಧಿಸಾಧಿಸಿ, ಹೊತ್ತುನೋಡಿ. (೧೪) ಹಳಲಿಸುವ ಹರಿಯೆಡೆಗೆ = ಅಳುತ್ತಿರುವ ರಾಮನೆಡೆಗೆ, ಅಂದವನು = ರೀತಿಯನ್ನು. (೧೫) ಆಸುರಾಂಗವ = ರಾಕ್ಷಸರ ಕೃತಿಯನ್ನು.

## ೮ನೇಯ ಪಾಠ

(೧) ದೈತ್ಯರಿಪು = ವಿಷ್ಣುವಿನ ಅವತಾರನಾದ ರಾಮನು, (೩) ಡಾಕುಳಿಗೆ = ಕಳ್ಳರ ಹಾವಳಿಗೆ, ಆಕುಳಿಗೆ = ನೀನು ಹೊಗಳುವ, ಅಲ್ಪಜನರ ಆಕಳಿಕೆಗೆ, ಹವಣ = ಪ್ರಮಾಣ–ನಮ್ಮೊಳಗಿನ ಅಂತರ, ನಾಕನಿಳಯವ ಮಾಡಿದರು = ಅವರನ್ನು ಸ್ವರ್ಗಕ್ಕೆ ಏರಿಸಿ ಮಾತಾಡಬೇಡ. (೪) ದುರ್ಗ = ಕಠಿಣಪ್ರಸಂಗ, ಕೈಮುಗುಚಿಕೊಂಡವರು = ದೂರಮಾಡುವರು [avert] ತಿರುಗಿ ಅಟ್ಟುವರು. (೫) ಸೊಂಪಗೆ = ಚಂದಕ್ಕೆ, ಗ್ರಹದ = ಪಿಶಾಚದ:

ಕಾಲನ ಕರಕರಗೆ = ಯಮನದಂಡಕ್ಕೆ – ಶಿಕ್ಷೆಗೆ – ವ್ಯಥೆಗೆ, ಸಂದುವರು = ಮುಟ್ಟುವರು – ಹೊಂದುವರು, ಸೌಖ್ಯದಲಲ್ಪಹರಹು = ಕಾಮವಾಸನೆಯ ಸುಖದ ವಿಸ್ತಾರ ಸ್ವಲ್ಪ – ಆದರೆ ಬಳಲಿಕೆ – ಆಯಾಸ – ಕಷ್ಟ ಬಹಳ. [೯] ಧುರಕೆ ನಿಂದರು = ನಿನ್ನ ಕೂಡ ಯದ್ಧ ಮಾಡಲಿಕ್ಕೆ ನಿಂತಿರುವರು. [೧೦] ಪಿಪೀಲಿಕ = ಇರುವೆ, ಕ್ಷುದ್ರವಸ್ತು, ಗೋಷ್ಪದ = ಆಕಳ ದಡ್ಡಿ, ಕೀಲಾಲ = ನೀರು, = ಇರುವೆಯ ಗುಂಪಿಗೆ ಆಕಳ ದಡ್ಡಿಯಲ್ಲಿರುವ ನೀರು ಪ್ರಳಯಕಾಲದ ಸಮುದ್ರದಂತೆ ಕಾಣುವದು ಹೇಗೋ ಹಾಗೆ, ಸ್ಥೂಲ = ನಿಮ್ಮ ದೃಷ್ಟಿಗೆ ದೊಡ್ಡವನು. [೧೧] ಎಣಿಕೆ = ವಿಚಾರ – ಮಾತು, ಅಣಕವಿಕ್ಕುವಿರ್ದೈಸೆ= ಹಾಸ್ಯಮಾಡುವಿರಷ್ಟೆ, ಅಸುಸರಿಸದೆ = ಪ್ರಾಣವನ್ನು ಹಿಂದೆಗೆಯದೆ – ಅಂಜದೆ, ಬಗೆವನಲ್ಲ = ಲಕ್ಷಿಸುವನಲ್ಲ. [೧೨] ದುರ್ಧರವು = ನಿನ್ನ ಛಲವು ಸೈರಿಸಲಾರದ್ದು, ಜೀವದ ಸರಸ = ಪ್ರಾಣದಕೂಡಚೇಷ್ಟೆ – ಅಂದರೆ ಕಾಮಕೇಳಿಯ ಶ್ರಮವು ಪ್ರಾಣಕ್ಕೆ ಹಾನಿ. [೧೩] ಉಬುಧಿ – ಅಬುಧಿ = ಸಮುದ್ರ, ಕರಕರಿಸಬೇಡ = ತ್ರಾಸು ಕೊಡಬೇಡ-ಕಾಡಬೇಡ.

## ೯ ನೆಯ ಸಾಠ.

[೧] ತಾಮಸತಿಳಿಯದು = ಅಜ್ಞಾನವು ಹೋಗದು-ದೂರಾಗದು, ಲಯಕಲೀತನೀತನ = ಪ್ರಳಯದೂರನಾದ ಈತನ, ನಿಶಾಚರಕುಲ- -ದಂಡ = ರಾಕ್ಷಸರಕುಲವೆಂಬ ಪರ್ವತಕ್ಕೆ ವಜ್ರಾಯುಧನಾದ. [೨] ಪರಿಪಾಕಚಿತ್ತದೊಳಿಲ್ಲ = ನೀನು ಶುದ್ಧಮನಸ್ಸಿನವನಿಲ್ಲ. [೩] ಮಿರಿ = ನನ್ನ ಮಾತುಮಿರಿ-ತಿರಸ್ಕರಿಸಿ-ಕೇಳದೆ, ಜಯದುಬ್ಬೇರ = ಗೆಲುವಿನದಮ್ಮು, ಖರಾಂತಕನ = ರಾಕ್ಷಸನ ವೈರಿಯಾದರಾಮನ, ಕೂರುಕೊಳದಿರು = ಬೇಕಂತ ಹಿಡಿಯಬೇಡ, [೪] ಭುವನನಿಧಿ = ನೀರಿನಸಮುದಾಯ [೫] ಪಚಾರಣೆ = ಉಪಚಾರವು, ಬಿರಿದು = ಸೊಕ್ಕಿ, ಮೂದಲೆಯ = ನಿಂದೆ–

ಯ, ಸರಿಸವಲಿ = ಸಮೀಪದಲ್ಲಿ-ಹತ್ತರ, [೬] ಆರಿದರಲಿ+ಅತಿಮು-ಥನ = ಯಾರಎದುರಿನಲ್ಲಿಹೆಚ್ಚಿನಕಾದಾಟ, ಆರುಭಟೆ = ಅರ್ಭಟವು, (೭) ಇರಿತಕೆ = ಚುಚ್ಚುವಿಕೆಗೆ-ಹೊಡತಕ್ಕೆ, ಅಳುಕು = ಬಾಧೆಪಡು-ಅಂಜು, ಉರುಬಲ್ = ಯುದ್ಧಕ್ಕೆ ನುಗ್ಗಿದರೆ, ನಿಧಾನಿಸಲು = ಚನ್ನಾಗಿವಿಚಾರಮಾ-ಡಿದಲ್ಲಿ, ಉರುಬಿಗೊಂಡು = ಉಬ್ಬಿಕೊಂಡು, ಬರತುವುದೆ = ಬತ್ತುವದೆ, [೮] ಅಟಮುಟಿಸಿ = ಮೀರಿಹೋಗಿ, ತಕುವುದೆ = ಮಣ್ಣಿನಗಡಿಗೆಯು ಬ್ರಮ್ಹಾಂಡವೆಂಬಘಟಕ್ಕೆ ಕೂಡಿಕೊಳ್ಳುವದೇನರದೇಹವು ಮಾಯಾಪ್ರಕೃತಿಗೆ ಕೂಡಿಕೊಳ್ಳುವದೇ ? ಎಂದೂಇಲ್ಲ, ಚಾವಟಿಯತನ = ಜಾರತನ. (೯) ಕೂಡು = ಶರಣುಹೋಗು, ಮಿತ್ರಭಾವದಿಂದ ಕೂಡಿಕೋ (ರಾಮನೊಡನೆ) [೧೦] ಹವಣೇ = ನಿನ್ನಸಾಮರ್ಥ್ಯ-ಶಕ್ತಿಯಾತಕ್ಕೆ ಹತ್ತೀತು? ರಣ-ರನ್ನ = ಯುದ್ಧದಲ್ಲಿ ತೋರಿಸಿದಧೈರ್ಯ. ನವದರು = ಹಾಳುಮಾಡಿಕೊಂಡವರು, ಶೆಣಸಿದರು = ಕೆದರಿಜಗಳತೆಗೆದು ಕಾದಾಡಿದವರು, ಶೃತಿಭೂಕನ್ಯೆ = ವೇದಮತ್ತು ಭೂಮಿಯೆಂಬ ಸ್ತ್ರೀಯಳನ್ನುಕದ್ದ ರಾಕ್ಷಸರಂ, ಕಡು = ಶೂರತ್ವ [೧೧] ಖರವೀರರಹ = ರಾಕ್ಷಸವೀರರಾದ, ಸುರಪಸುತ =ಇಂದ್ರಜಿತು, ಕರವಮಾಜಿಸಿಕೊಂಬ = ಕೈತಪ್ಪಿಸಿಕೊಳ್ಳುವ-ಯುದ್ಧಕ್ಕೆ ಹೆದರಿ ಹೋಗುವ, ನೆರವಿ=ಸೈನ್ಯಸಮೂಹ. [೧೨] ಹೆಚ್ಚುಕುಂದಿನಕೊರತೆಬಾರದು = ನೀನು ಹೆಚ್ಚಿನವನೊರಾಮನು ದೊಡ್ಡವನೋ ಎಂಬ ಸಂಶಯವೇಬಾರದು. [೧೩] ತುದಿಗೆ = ಕಡೆಗೆ, ನಿಲುಕಡೆಗಳು = ಸ್ಥಿತಿಗಳು-ಮಾತುಗಳು, ತಿಳುಹಗಳು = ಬುದ್ಧಿಗಳು ಕಲಹಕಂಜುವದತ್ತಲಾ = ನಿಮ್ಮಬುದ್ಧಿಗಳು ಯುದ್ಧಕ್ಕಂಜುವ ತಿಳುಹುಗಳು, ಅತ್ತಲಾ _ ಆಕಾರಣದಿಂದ, ಕಾಳ್ಗಡೆಯ-ಬೇಡ = ಸುಮ್ಮನೆ ನಿಂದಿಸಬೇಡ, ಕೆಟ್ಟದ್ದನ್ನಾಡಬೇಡ. [೧೪] ಬೊಮ್ಮ-ನಮಾತದಂತಿರಲಿ = ಆರಾಮನ ದೊಡ್ಡಸ್ತಿಕೆಯಮಾತು ಒತ್ತಟ್ಟಿಗಿರಲಿ-ವೇದಾಂತದಮಾತುಬೇಡ, ಕಡೆಯಿಣ = ಅಂತ್ಯದ [೧೭] ಪೋತನ = ಸಂಸಾರ ಸಾಗರವನ್ನು ದಾಟಿಸಲಿಕ್ಕೆ ಹಡಗದಂತಿರುವ ದೇವರ, ಬಹಡೆ = ಬರಲಿಚ್ಛಸುವರು ಬರುವದಾದರೆ, [೨೦] ಜನನ...........

ವರದ = ಯಮನಪಾಶಕ್ಕೆ ಸಿಲುಕದರೀತಿಯನ್ನು ತಿಳಿದ. [೨೧] ನೆಲಹು-ಟ್ಟಿಹೊಂದುವ = ಹುಟ್ಟಿದಬಳಿಕ ಸದ್ಗತಿಗೆಹೊಂದುವ, ಸುತ್ತುದೊಡಕಿನ = ತೊಡರು ಸಮಗ್ರತೊಡಕಾದ. ತೊಡರು = ಆಭರಣ, [೨೬] ಅಘ....ಭಜಂಕನ =ಅನೇಕ ಪಾಪಗಳನ್ನು ನಾಶಮಾಡುವವನ, ದಂತಾವಳಿ = ಆನೆಯಗುಂಪು [೨೭] ನೆಲನವ್ಮೈದೋರಿದನು = ಬಲಿಯ ಮೂರುಪಾದ ಭೂಮಿಯನ್ನು ಅಳೆದು ತಕ್ಕೊಳ್ಳುವಾಗ ವಿಷ್ಣುವು ತನ್ನದೇಹವನ್ನು ಹೇಗೆ ಬೆಳಸಿದ್ದನೋ ಅವರಂತೆ ಅತಿಕಾಯನು ವೀರಾವೇಶದಿಂದ ಉಬ್ಬಿದಶರೀರದಿಂದ ಕಾಳಗಕ್ಕೆಬಂದನು [೨೮] ಮಲವಡೆ = ಎದುರಿಸಲು, [೨೯] ಬರಿಸುವಿತದೇ = ವ್ಯರ್ಥ-ವಾಯಿತೇ. (೩೦] ಹಾವಿನಲಾತಮಿಶ್ರಿಯಲಿ = ಹಾವಿನಂತೆ ಮತ್ತ ಕಗ್ಗ-ತ್ತಲೆಯಂತೆ. [೩೧] ಸದ್ವೈವನು = ದೇವತಾಭಕ್ತಿಯುಳ್ಳವನು, (೩೩) ಹರಿಗೆ = ಫಲಕ, a shield, ಚರಣ = ಚರಿಸುವ, ಮೇಲಿಡಿದಜೊಧರ = ಮೇಲೆ ತುಂಬಿದ ಯುದ್ಧಪುರುಷರ, ಮೊರಹುರದಿ = ಶಿಟ್ಟಿನಿಂದ. [೩೪] ರಣದಾನಿಕೆಯ = ರಣದಲ್ಲಿ ಸ್ಥಿರವಾಗಿನಿಂತು ಕಾದಾಡುವ, ರಣ - ರಂಜಕ .... ರೌರವದ = ಯುದ್ಧದಭಯಂಕರಸಪ್ಪಳದ, ಅಂಬರದವಳಯ = ಆಕಾಶಮಂಡಲ. [೩೫] ಅಸುವನುಗಿವುತ = ಪ್ರಾಣಹರಣಮಾಡುತ್ತ-ಕೊಲ್ಲುತ್ತ, ಒಕ್ಕವ್ಮೈಗಳಲಿ = ಒಂದೇವ್ಮೈಯಿಂದ, ಸವಿಾಕಸಲೀಲೆ = ಯ-ದ್ಧದಲೀಲೆ, ಕೋಲಗೊರೆ = ನಟನದಧ್ವನಿ, [೩೬] ಉಡಿದ = ಕತ್ತರಿಸಿದ, ಉಪ್ಪರಿಸಿ ನಿಗುರಿನನೆತ್ತರ = ಎತ್ತರವಾಗಿ ಚಿಮ್ಮುತ್ತಿರುವರಕ್ತದ, ಕಣ = ರಣಭೂಮಿ. [೩೭] ಬವರ = ಯುದ್ಧ, ಆಸುರಘರಟ್ಟ = ರಾಕ್ಷಸರಸಂಹಾರಿ ರಾಮ, ಹೊಳಕಿದನು = ವಿರಾಜಿಸಿದನು. [೩೮] ಭಾ-ರಣಿಯಭಟ = ಗೌರವದ ವೀರನು. [೪೦] ಸರಳಭಕ್ತಿ = ವೈರಿಗಳಮೇಲೆ ಬಾಣಬಿಡುವದೇ ಸವ್ಮಭಕ್ತಿಯು. [೪೧] ನಿಶಾಟ = ರಾಕ್ಷಸ, [೪೨] ಮರುಕ = ಸಾಯುವದುಃಖ, [೪೩] ಸರಸಿಜಕರ್ಣಿಕೆ = ಕಮಲದಗಡ್ಡೆ [೪೪] ಕೈಲುಳಿಯಲಿಚ್ಚನು ಊರ್ಮಿಳಾಪತಿಯ = ಕೈಬಾಣದಿಂದ ಲಕ್ಷ್ಮ-ಣನನ್ನು ಹೊಡೆದನು. [೪೫] ಗೀರ್ವಾಣತತಿ = ದೇವತಾ ಸಮೂಹ.

[೪೬] ಉಚ್ಚಳಿಸಿದುದು = ಪ್ರಕಾಶಮಾನವಾಯಿತು, ಬೆರಗಿಡೆ = ಆಶ್ಚರ್ಯ ಚಕಿತರಾಗುವಂತೆ ಮಾಡಲು, ಬಹುಶೃತಿಹಾರವಿಸೆ= ಅನೇಕ ವಾದ್ಯದಶಬ್ದಗಳು ಉಂಟಾಗಲು. [೪೭] ಘಾಳಿಸುವ = ಹೊಳೆಯುವ, ಕದಪು = ಗಲ್ಲ, ವಿಶಿಖ = ಬಾಣ, [೪೮] ಬೆಳಗಲಶ್ರುಜಲಂಗಳ್ = ಕಂಣ್ಣೀರುಹೊಳೆಯಲ್ಲಿ, ದುಗುಡ = ಚಿಂತೆ-ವ್ಯಥೆ, ಅರಿಯಮ = ಸೂರ್ಯ, ಹಮ್ಮೈಸಿಬಿದ್ದನು = ಮೂರ್ಛೆಹೋಗಿಬಿದ್ದನು.

# ೧೦ನೆಯ ಪಾಠ

[೧] ಕೊಸರಿಕೆಯ = ಅಭಿಲಾಷೆಯ, [೩] ಗಾಡಿನತನ = ಸೊಬಗು-ಚಂದ, ಸೀವರಿಸುತಿದೆ = ಅಸಹ್ಯವಾಗಿ ತೋರುತ್ತದೆ, ಹಂಕರಿಸುತಿದೆ = ಅಭಿಮಾನಪಡುತ್ತದೆ, ಓಸರಿಸುತಿದೆ = ಬಿಟ್ಟುಹೋಗುತ್ತದೆ, [೬] ಪಾತಕಕೆಉರಿಸಿ = ಬೆಂದು-ಸುಟ್ಟುಕೊಂಡು, [೮] ಜನಜನಿತ = ಎಲ್ಲರಿಗೂಗೊತ್ತಿದ್ದದ್ದು, ಮಗಧತನುಜಾತನೂಭವ = ಲಕ್ಷ್ಮಣ. [೯] ಸುಪ್ರೌಢಿ = ಅತ್ಯಂತಜಾಣತನ, ಬಲುದೊಡ್ಡಸ್ತಿಕೆ, ನೆರೆಯದೆ = ಕೂಡಿಕೊಳ್ಳದೆ, ಹಮಳವಿರದೇ = ಸುಖವಾಗಿರದೇ, ಮದದಮುಂದಣಿಗೆ = ಸೊಕ್ಕಿನ ಹವ್ಯಾಸಕ್ಕೆ, [೧೦] ಖರವಿರೋಧಿತ್ರಿದಶರದೂಷಣ = ರಾಮನು ದೇವತೆಗಳನ್ನು ದೂಷಣೆಮಾಡುವಂಥವರ. (೧೧) ಮಾಗಸದಿರು = ಪ್ರಯತ್ನಮಾಡಬೇಡ, ಹಗರಣಕೆ = ಈ ಪ್ರಪಂಚವೆಂಬ ಮೂರು ದಿವಸದ ನಾಟಕಕ್ಕೆ. [೧೩] ಭಲ್ಲುಕರು = ಕರಡಿಯಂತಿರುವವರು

# ೧೧ ನೆಯಪಾಠ

[೪] ಹಗೆಯಆನಿಸಿದೆ ಸಂವರ್ತಮೃತ್ಯುವಿನಾನಕೆ=ಶತ್ರುಗಳನ್ನು

ಪ್ರಳಯಕಾಲದ ಮೃತ್ಯುವಿನಬಾಯಿಗೆ ತುತ್ತಾಗಿಮಾಡಿದೆ. [೫] ಬೇಡನಾ-
ಗದೆ = ಇವನು ಯಾರಿಗೂಬೇಡ ಎಂದುಅನ್ನಿಸಿಕೊಳ್ಳದೆ ಅಂದರೆ ಯಾರಿಗೂ
ಬೇಸರನಾಗವೆ, ರೋಷವಲಿ = ಶಿಟ್ಟಿನಭರದಲ್ಲಿ, ಖಯಖೋಡಿಯಲ್ಲದೆ =
ಸುಮ್ಮಸುಮ್ಮನೆ ಅಸೂಯೆಪಟ್ಟು ಎರಡನೇಯವರನ್ನು ದೂಷಿಸುವಂಥವನೂ
ಅಲ್ಲದಂಥ [not being malignant calumniator] ಖಾಡಾಖಾಡಿ
ಯಲಿ = ಮಲ್ಲಯುದ್ಧದಲ್ಲಿ-ಎದುರುಬದರಾಗಿ-ನಿಂತು ಸರಿಯಾಗಿಕಾದಾಡಿ. (೬)
ಸೂಳಪಿಸಿಕೊಳುತ = ಬಾಯಿಂದ ಧ್ವನಿಮಾಡುತ್ತ-ಅಂದರೆಅಳುತ್ತ, ಬರ್ಹಿ-
ರ್ಮುಖರಹೃಚ್ಛೂಲ = ಬೆಂಕಿಯಮೋರೆಯವರಾದ ದೇವತೆಗಳಹೃದಯಕ್ಕೆ ಶೂ-
ಲಪ್ರಾಯನಾದ, ಹರ-ಣನಭಾನು = ನನ್ನ ಪ್ರಾಣಕ್ಕೆ ಸೂರ್ಯಸ್ವರೂಪನಾದ (೧೧)
ಸೊದರದತ್ತೆ = ಸೂರ್ಪಣಖಿ. [೧೨] ತಕ್ಕೈಸಿಕೊಂಡು = ತಗ್ಗಿಸಿಕೊಂಡು,
ಕೊಸರಿದಳು = ಹೆಚ್ಚಾಗಿ ರೇಗಿಸಿದಳು. (೧೩) ತಳವೆಳಗಿನಲಿ = ತಳಮ
ಳವಾಗಿ–ದುಃಖದಿಂದ, (೧೪) ಖಂಡೆಯವನು + ಉಗಿದು = ಖಡ್ಗವನ್ನು
ಚಲ್ಲಿಕೊಟ್ಟು, ಅತಿಮುಸದ = ಬಹಳ ಸಿಟ್ಟಿಗೆದ್ದ, ರಣನಿಷ್ಕೃತಿಗೆ = ಯು-
ದ್ಧದ ಪ್ರಾಯಶ್ಚಿತ್ತ (atonement) ರಂಜಕವಾದುದು = ಒಪ್ಪುವಂಥಾ
ದ್ದು ಯಾವದು ಅಥವಾ ಪುಟಗೊಳಿಸುವದು ಯಾವದು (gladdening
or igniting) (೧೫) ತಗ್ಗೊತ್ತಿ = ಹಿಂದಕ್ಕೆದೂಡಿ. (೧೬)
ಆರ್ತದಲಿ = ಶೌರ್ಯದಿಂದ, ಆಜಿಗೆ = ಯುದ್ಧಕ್ಕೆ, (೧೭) ಸೋಕಿದ-
ಬಲೆಗೆ = ಮಾಡಿಕೊಂಡ ಸ್ತ್ರೀಯುಳಲ್ಲಿ-ಮನವಮಾಡುವದು ರಾಯರಿಗೆ, ತೊ
ಜೆ = ಭೂಷಣ, ಒಳ್ಳೇನಡತೆ. (೧೮) ವಿನನಾಕಹವ ನೆಳಲಾಗದಿರಿ =
ಸ್ವರ್ಗವಲ್ಲದಂಥ ನರಕವಾಸಿ ಗಳಾಗಬೇಡಿರಿ (ಇಲ್ಲಿ ಪಾಠ ಸ್ವಲ್ಪ ತಪ್ಪಿದೆ)
ಜೀವವಿರೋಚನ = ಜೀವಪ್ರಕಾಶ, ಚಟುಲ = ತೀಕ್ಷ್ಣವಾದ–ಹವನಾದ,
ಚಪೇಟಿಕದ = ಗಲ್ಲವಮೇಲೆ ಹೊಡೆದ ಹೊಡೆಯುವಂಥ, ಚಾಚಿದರೆ =
ಮುಂದೆ ಬೆಳಸಿನರೆ, (೨೦) ಹಳಮೆಗೆ = 1 ದುಃಖಕ್ಕೆ 2 ಪದ್ಧತಿ ಅಂದರೆ
ದುಃಖವನ್ನು ಮರಿಸಿ ಇಮ್ಮಡಿಸುಖ. ಪಾಳೆಯದಪಸರದಲಿ = ದಂಡು ಇಳ
ಕೊಂಡ ಸಮೂಹದಲ್ಲಿ. (೨೨) ಮೊಗಮೊಗದು = ಭಂಡಾರದಿಂದ ಹೊ

ರಗೆ ತಗೆದು, ಮುಡಮುರಿದತೆ = ಹಿಮ್ಮಡ, ಹರಡು ಮುಂದಕ್ಕೆ ನಡೆಯದಿದ್ದರೆ (೨೩) ಬೀಳ್ಕೊಂಬುದು = ಅವುಗಳಿಂದ ಅಪ್ಪಣೆ ಪಡಕೊಳ್ಳುವದು,-ಅಂದರೆ ಹೆಂಡರು ಮಕ್ಕಳು ಅಲಂಕಾರ ಈ ವಸ್ತುಗಳ ಮೇಲೆ ಆಶೆ ಬಿಡುವದು. (೨೪) ಜಿಣುಗಿದ+ಆಹವ = ನಿಂತ ಯುದ್ಧ-ಯುದ್ಧದ ಉತ್ಸಾಹ ಕಡಿಮೆಯಾದಲ್ಲಿ, ಸೆಕ್ಕುವದು = ಹಾದರದಿಂದಾಗುವ ಕೆಟ್ಟಪರಿಣಾಮುವನ್ನು ಜೋಡಿಸುವದು, ಅಂದರೆ ಯುದ್ಧದಲ್ಲಿ ಕಾದಾಡುವಾಗ ನಿಮ್ಮ ಉತ್ಸಾಹ ಕುಗ್ಗಿದರೆ, ಅದರಿಂದ ಸತಿಯ ಹಾದರದಿಂದಾಗುವ ದುಷ್ಪರಿಣಾಮುವನ್ನು ಉಣ್ಣಬೇಕಾದೀತು, ಸೊಕ್ಕು = ಕೂಡಿಸು (insert, add = That is, it is adding to the chains of misery, the usual consequence of adultery) ಅರಿದುಮೆರೆವುದು = ವೈರಿಗಳನ್ನು ಕೊಂದು ಮೆರೆಯು ಬೇಕು. ಹಣೆಗಳಲಿ.... ...ರಂಗವಲಿ = ಯುದ್ಧರಂಗದಲ್ಲಿ ಬಹಳ ಎಚ್ಚರ ದಿಂದ ಮುಂದಾಲೋಚನೆಯಿಂದ ಕೂಡಿರಬೇಕು. ಆದರೆ ಅದರಲ್ಲಿ ಉತ್ಸಾಹವು ಭಟರಲ್ಲಿ ಕಡಿಮೆಯಾದಲ್ಲಿ ಸತಿಯ ಹಾದರದಂತೆ ಬಹಳ ಕೆಟ್ಟಸ್ಥಿತಿಯೊದಗುವದು. ಆದ್ದರಿಂದ ಸ್ವಾಮಿಯ ಉಪ್ಪುಂಡು ಬಹಳ ಶೌರ್ಯದಿಂದ ಕಾದಿ ರಾಜನಋಣವನ್ನು ತೀರಿಸಬೇಕೆಂದು ಸುಪಾರ್ಶ್ವನು ಯೋಧರಿಗೆ ಹುರುದುಂಬಿಸುವನು.

ನಿರ್ಬುದ = One hundred million. 100, 000, 000
ಹದಿನೆಂಟು ನಿರ್ಬುದ = ೧೮೦೦, ೦೦೦, ೦೦೦. ಇಷ್ಟುಸೈನ್ಯವಾಗುವದು.

## ೧೨ನೆಯ ಪಾಠ

(೧) ದೇವರಿಗೆಂದ ಮಾತಲ್ಲ = ದೇವರನ್ನು ಕುರಿತು ನಾನು ಹೇಳುವಮಾತು ಸಂಬಂಧಿಸದು. ತವಿಸಬಹುದು = ಆರಿಸಬಹುದು. (೩) ದುಮ್ಮಾನದಾಗೆಲವೆನಿಸುವುದು = ದುಃಖದಜಯ. (೪) ಸತ್ಯವನೊತ್ತಿಯಾಳುವ = ಸತ್ಯವನ್ನು ಹಿಂದಕ್ಕೆ ದೂಡಿ ಆಳುವ. (೬) ನಿಗರ ನಿನಗಿಲ್ಲ =

ನಾನು ಎಂದೂ ನೀನು ಸೇವಕನೆಂದು ತಿಳಿದು ನಿನಗೆ ನಿಗ್ಗರ (ತ್ರಾಸು) ಮಾಡಿಲ್ಲ, ಮರಳಿಚಿ = ಮತ್ತೆ, ಪುನಃ.

## ೧೩ನೆಯ ಪಾಠ (ಅ)

(೧) ಯರವಿಗನು ಇಹಪರಕೆ = ಈ ಲೋಕಕ್ಕೂ ಪರಲೋಕಕ್ಕೂ ಹೊರತಾದೆನು. ಹರಹಿಕೊಂಬನು = ತನ್ನ ಪಾಶವನ್ನು ಪಸರಿಸುವನು (spead) (೪) ಹಿಳಿದು+ಅಳಿವಳು = ಹಿಂಡಿಹಿಪ್ಪೀಮಾಡಿ ಕೊಲ್ಲುವಳು. (೫) ಕೊಲೆಗೆಕೊಕ್ಕರಿಸಿದನು = ಅಪೇಕ್ಷೆಮಾಡಿದನು - ಧೈರ್ಯತಾಳಿದನು. (೭) ಮಿತ್ರ = ಸೂರ್ಯ, ಧಾತುಧವಳಿಸಬಲ್ಲದೇ = ಧೈರ್ಯವು ಪ್ರಕಾಶವಾದೀತೇ, ಖದ್ಯೋಗ = ದೀಪದಹುಳ, ಆಟವಿಕತನ = ನಮ್ಮಪರಾಕ್ರಮ ಪೌರುಷವು ಸೀತೆಯಗಂಡನಮುಂದೆ ತೋರಬಹುದೆ, ಎಸಗು = ತೋರು. (೮) ಉರುಬದಿರುಕಡಲೊಳಗೆ = ಸಮುದ್ರದಲ್ಲಿ ಒಗೆಯಬೇಡ, ಉರುವ–ಮುನಿ= ಶಿಟ್ಟುಳ್ಳಮುನಿ, ಜವ್ವನಜರಣವನಿತೆಯ = ಪ್ರಾಯದ ಮತ್ತು ಮುಪ್ಪಿನ ಸ್ತ್ರೀಯರ. (೯) ಎಣೆಗೆ = ಎಣಿಕೆಗೆ-ವಿಚಾರಕ್ಕೆ. ಒಲಹಿನಲಿ = ಪ್ರೀಯನ್ನುಬಗ್ಗಿಸಿ, (೧೦) ಸರಿನಿಧಿ = ಸಮುದ್ರ, (೧೪) ಅರುಹನಾಗುಅರಿವಿಂಗೆ = ಈಜ್ಞಾನಕ್ಕೆ ನೀನು ಎಚ್ಚರವುಳ್ಳವನಾಗು ಅಂದರೆ ಇದನ್ನು ನೀನು ತಿಳಿದುಕೋ.

## ೧೩ನೆಯ ಪಾಠ. (ಬ)

(೧) ಅಳುಕಿಸಿತು = ಅಂಜಿಸಿತು ಬಾಗಿಸಿತು, ಅಧಟು = ಪರಾಕ್ರಮ, ಕೊಡಲಿಯಕೊಲೆಗಡಿಕ = ಪರಶುರಾಮ, (೨) ಉಪ್ಪರಿಸಿ = ಹಾರಿಬಿಟ್ಟು, ಉರಕೆಕಬ್ಬಿಯಕುಸಿದು = ಎದೆಯಕೋಲುಬಗ್ಗಿ, ಕುಕ್ಕರಿ–ಸಿದವು = ನೆಲಕ್ಕೆಬಿದ್ದವು, ಕನಿಸ = ರಕ್ತ, (೩) ಉಲುಹುವೆಗದ = ಸ-

ಪ್ಪಳಿಲ್ಲದ, ಮಲೆವಮಹಿಮರ = ಎದುರಾಗಿನಿಂತು ಕಾದಾಡುವ ಸೇನಾನಾ-ಯಕರ, ಮುಂಬಿನಲಿ =ಮುಂದುಗಡೆಯಲ್ಲಿ, ಬೈಸಿಕೆ = ಕಟ್ಟು, ಕಾರ್ಯ, ಭಾರ್ಗವ = ಪರಶುರಾಮ. (೪) ಭೂಭುಜ = ಭೂಮಿಯನ್ನು ಉಂ-ಣುವವ = ಅರಸು, ಪರಿಪಾಡುಗಳು =ಪದ್ಧತಿಗಳು, ರೀತಿಗಳು, ಆಕ್ರಮಿ-ಸದಿಹುದೇ ಸುಪ್ರೌಢಿ = ನಮ್ಮಮೇಲೆ ಏರಿಬರದಿರುವುದೇ ನಿಮಗೆ ಗೌರವ, ಒಪ್ಪದಲಿ = ನಮ್ಮಿಬ್ಬರ ಒಪ್ಪಿಗೆಯಿಂದ (೫) ಬಲುಹದಂಡಿಗೆ = ನಿಮ್ಮ ಸಾಮರ್ಥ್ಯವು, ಹುಲುದೊರೆಗಳು = ಅಶಕ್ತರಾದ ಅರಸರು. (೫) ಅಗ್ಗಳ-ರು = ಶ್ರೇಷ್ಟರು, ಬಲಿಷ್ಟರು, ವೆಗ್ಗಳರು = ಅಧಿಕರು (ಗೌರವಾರ್ಥಯಲ್ಲಿ) ವಿಧಿವಿಹಿತ = ಶಾಸ್ತ್ರದಲ್ಲಿಹೇಳಿದ. (೭) ಸೆಣಸುವುದು = ಪ್ರತಿಸ್ಪರ್ಧೆಯಿಂದ ವಾದಮಾಡುವುದು, ಅಣಕಿಸುವದು = ಸೋಲಿಸಿ ಮುಖಭಂಗಿತರ ಮಾಡುವು-ದು, ಇಂಗಣ = ಬೆಂಕಿ, ಕಲ್ಪದಕಣುಗಿಡಿಯೆ = ಪ್ರಳಯಕಾಲದ ರುದ್ರನ ಕಂಣಕಿಡಿಯೊ ಎಂಬಂತೆ, ಬಗೆಗೆ ಮನದಂದ = ಆ ರುದ್ರನ ರೀತೆಯಂತೆ, ಮಾಡಲೆಳಸಿದನು. (೮) ತರಣಿ = ಸೂರ್ಯ, ತುಂಡದಲರೆವ = ಬಾಯಿಂದ ತಿಕ್ಕುವ, ರಾಹುವತಾರೆ = ರಾಹುನಕ್ಷತ್ರವು, ತವಕಿಸಿ = ಆರ್ಭಡಿಸಿಬಂದು. [೯] ಹಾಯಿತು+ಉರಿ ಹೊವರೆದ್ದು = ಪ-ರಶುರಾಮನ ಕೊಡಲಿಯಬಾಯಿಂದ ಉರಿಯು ದಟ್ಟವಾಗಿ [ಹೊದರೆದ್ದು] ಬಂತು, ಸೀವರಿಸೆ = ವೋಹದಲ್ಲಿ ಹಾಕಲು, ಭ್ರಾಂತಿಗೊಳಿಸಲು, ನೊಗ-ದುದು = ಹೊಕ್ಕಿತು ವ್ಯಾಪಿಸಿತು, ಹರುವಾಯಿತೆಂದು = ಇದಕ್ಕೆಪ್ರತಿಯಾಗಿ ನಾವು ಉಪಾಯ ಮಾಡತಕ್ಕದ್ದೆಂದು, ಹಂಮೈಸಿದರು = ಮೂರ್ಛೆಹೋದರು – ಅಳವಳಿದ = ಶಕ್ತಿಹೀನನಾದ–ಅಂಜಿದನು. (೧೦) ಹಸುಳೆ =ಬಾಲಕ ಅಗ್ಗದಜವನು = ಯಮನಂತೆ ಕ್ರೂರಪರಾಕ್ರಮಿಯು, ಮಹೀಶಾಧೀಶವಂಶ = ಕ್ಷತ್ರಿಯರವಂಶ, ಹರಿತಂದ = ಓಡಿಬಂದ. (೧೧) ಅಯ್ಯನ = ಅಪ್ಪನ, ದಂಡಿಯನು = ನಾಶವನ್ನು, ಸುಳಿಸಿದನು = ತಿರುಗಿಸಿದನು, ಸುಕಾಂಡ = ತನ್ನಉತ್ತಮವಾದ ಬಾಣವನ್ನು, ಭೃಗುಸುತ = ಪರಶುರಾಮ. (೧೨) ತೋಮರಾಗ್ರ = ಕೊಡಲಿಯಮುಂಡೆ. (೧೩) ಉಗಿದು = ಜಗ್ಗಿ,

ಒನೆಯಿ = ಬಾಗಲು-ಕೋಲು =ಬಾಣ. (೧೪) ಪಾರ್ಥಿವಜನಹಾಂಬುಧಿ = ಕ್ಷತ್ರಿಯರೆಂಬ ಸಮುದ್ರ. (೧೫) ವಿಶೇಷಜ್ಞಾಪ್ತಿ ಸೂಕ್ತಿಕರು ಓದೆ = ವಿಶೇಷವಾಗಿ ಶಾಸ್ತ್ರಾಭ್ಯಾಸಮಾಡಿದವರು ಓದುವಂತೆ, ಜಂಜಡ = ಚಿಂತೆ ತ್ರಾಸ, ಸಾಕು =ಮುಗಿಯಿತು. (೧೬) ಜನಪರುಳಿದವರಿಲ್ಲ = ನನಗೆ ಎ-ದುರುನಿಲ್ಲುವ ಕ್ಷತ್ರಿಯರಸರು ಇನ್ನು ಯಾರೂ ಉಳಿದಿಲ್ಲ. ರಾಮನಾದರೊ-ಮನುಷ್ಯನಲ್ಲ, ವಿದು = ವಿಧು = ವಿಷ್ಣು, ಗೋಮಿಸಿ = ಲಕ್ಷ್ಮಿ. ಗಂಧನ-ಘನತರದಘಾಡಣೆಯಲಾ = ವಿಷ್ಣು ಮತ್ತು ಲಕ್ಷ್ಮಿ ಇವರೀರ್ವರಪ್ರೇಮ-ದ ಪುತ್ಥಳಿಯಲ್ಲವೇ ಇವನು ರಾಮನು, ಗತಿಪಲ್ಲಟಿಸಿತು = ನನ್ನ ಅವತಾರ-ಮುಗಿಯಿತು, ರಾಮ =ಪರಶುರಾಮನು. (೧೭) ದೀಪ್ತಿನ್ಯಾಯ = ದೇಹ ಲೀದೀಪ್ತೀನ್ಯಾಯ = ಅಂದರೆ ಹೊಸ್ತಲದಲ್ಲಿಟ್ಟ ದೀವಿಗೆ ಒಳಗೂಹೊ-ರಗೂ ಬೆಳಕನ್ನುಂಟುಮಾಡುವಂತೆ, ರಾಮನ ಅವತಾರವು ನನ್ನ ಅವತಾರವ-ನ್ನು ರಾಮನ ಸ್ವಂತಅವತಾರವನ್ನು ಪೂರ್ತಿಗೊಳಿಸುವದೆಂಬ ಭಾವದಿಂದ, ನಿಷಂಗಮದಸಾಯಕವ = ಬತ್ತಳಿಕೆಸಹಿತವಾದ ಖಡ್ಗವನ್ನು.

## ೧೪ನೆಯ ಸಾರ.

(೧) ಅರಿಯಕಂಧರ... ವೈರಿಯ ಕುತ್ತಿಗೆಯೆಂಬ ಅಡವಿಯಲ್ಲಿ, ಖದ್ಯೋತ+ಸರಣಿಗೆ . ದೀಪದಹುಳದಂತೆ ಸತ್ತು ಸಿಡಿದು ಬೀಳುವತಲೆ, ಮಾರ್ಗಣದ ಮುಖದಿಂದ ಉಡಿದ = ಬಾಣದಹೊಡತದಿಂದ ಚೂರಾದ – ಶೀಳಿದ, ಗೆಡದೆರಹ = ಈಕೆಡುಕನ್ನು ತಪ್ಪಿಸುವಮಾರ್ಗ–ಉಪಾಯ. (೨) ಕೋಲಮಳೆ = ಬಿಲ್ಲಿನಮಳೆ. ಸಾಕುಮಾತು+ಅಳಿಸಮರ = ಮಾತುಸಾಕು, ಈ ಯುದ್ಧನಾಶವಾಗಲಿ, ಸಮಿಾಕಬಾಹಿರರು = ಯುದ್ಧಬಿಟ್ಟವರು, ಮೃ-ತ್ಯವು ಈ ಲೋಕೈಕವೀರನ ಓಕರಿಸಿದಳು = ಮೃತ್ಯುದೇವಿಯು ಈಅಸಾಧಾರ-ಣ ವೀರನಾದ ರಾವಣನನ್ನು ಓಕರಿಸಿ ಬಿಟ್ಟಿರುವಳು, ೪ ಹರಹಿನಲಿ =

ವಿಸ್ತಾರದಲ್ಲಿ, ರಿಪು ...ಭಾಗ್ಯರಲೆ = ವೈರಿಗಳ ಜಯಪ್ರಸಿದ್ಧಿಗೆ ನಾವು ಭಾಗ್ಯ-ರಲ್ಲ—ಅದುನಮಗೆ ದೊರಕದು, ಎರಡುನಾಲಿಗೆಯಾದದು = ವಚನಭ್ರಷ್ಟರಾ-ದೆವು. (೫) ದಿನೇಂದ್ರತನುಜ = ಸುಗ್ರಿವ. (೬) ಉತ್ತರಾಯಿಗಳು = ಯಾರಹಂಗಿನಲ್ಲಿ ಇಲ್ಲದವರು. (೭) ಊಣಯನೆಮ್ಮಿತು = ನಮಗೆ ಕೊರತೆ ಯುಂಟಾಯಿತು. ಅಂದರೆ ನಮಗೆ ಅಪಜಯವಾಯಿತು. (೮) ಕಾಮು—ಕರ+ಆಡಿಕೆಯ = ಜಾರರಚೇಷ್ಟೆಯ ಅಂದರೆ ಕಾಮಿಗಳು ಮಾಡತಕ್ಕ ನೀಚ—ಕಾರ್ಯವನ್ನು. (೯) ಮರಣಕ್ಕೊರಳಿದೆನಾದಡೆ ಈಶ್ವರಭಜಕನಲ್ಲ = ನಾನುಮರಣತಪ್ಪಿಸಲಿಕ್ಕೆ ಪ್ರಯತ್ನಮಾಡಿದಲ್ಲಿ ಈಶ್ವರಭಕ್ತನೇಅಲ್ಲ. (೧೦) ಆವಬಳವ = ನಿನ್ನಒಲವುಎತ್ತ ಅಂದರೆ ಕೊಲ್ಲುವದಕ್ಕೊ ಬಿಡುವದಕ್ಕೊ ಹೇಳು, ಬಿಡೆಯವ = ಭೀಡೆದಮಾತುಬೇಡ.

## ೧೫ನೆಯಪಾಠ

(೨) ಘಾತಳಿಕೆ = ಘಾತಕತನಕ್ಕೆ. (೩) ಓತಡೆ = ನನ್ನ-ನ್ನುಪ್ರೀತಿಸಿದರೆ, ಉಳಿವು = ಜೀವನವು, ವೀತಿಹೋತ್ರನ ಹೊಗುವೆನು = ಅಗ್ನಿನಾರಾಯಣನಿಗೆ ನನ್ನಪ್ರಾಣವನ್ನು ಆಹುತಿಯಾಗಿ ಕೊಡುವೆನು. (೪) ಡಿಂಗರಗ = ಆಳು. (೬) ನೋಯನುಡಿದು = ಮನಸ್ಸಿಗೆ ಹತ್ತುವಂತೆ ಮಾತಾಡಿ, ಸಂಗೀತನಡೆದುದು = ರಾವಣನೊಡನೆ ಮಾತುಕತೆ ಬೆಳೆಯಿತು, ದಾಯತಪ್ಪಿತು =ಉಪಾಯ ತಪ್ಪಿತು= ಪಗಡೆ ಸರಿಯಾಗಿ ಬೀಳಲಿಲ್ಲ. (೭) ತವಿಸಲಿಲ್ಲ= ಕೊಲ್ಲಲಿಲ್ಲ, ನಮ್ಮನ್ವಯಾಗತದನರಣ್ಯನನು = ನಮ್ಮಕುಲ—ದಲ್ಲಿ ಹುಟ್ಟಿದ ಅರಸನನ್ನು, ವಿವಶೆಯಾದ = ಚಂಚಲಬುದ್ಧಿಯುಳ್ಳ. (೮) ಒಪ್ಪಗೊಳು = ಅಂಗೀಕರಿಸು, ಇಪ್ಪುರಿಯ = ದುಪ್ಪಟ್ಟು ಬೆಂಕಿಯ, ತಾವರೆಯ ನೈದಿಲಿನಸಖ = ಚಂದ್ರ ಮತ್ತು ಸೂರ್ಯ ಈ ವಂಶದ ಅರಸರು. (೯) ಉಪಹತಿ ಬಾರದಂತಿರೆ = ಬಾಧೆ—ಅಪಕೀರ್ತಿ ಬರಬಾರದೆಂದು, ಎನ್ನದೈ = ನನ್ನನ್ನೇ ಕೂಡಿದೆ, ತೂಳಿಸು+ಅಗ್ನಿಯ = ಬೆಂಕಿಯನ್ನು

ಹೆಚ್ಚಿಸು—ಪುಟಮಾಡು. (೧೦) ಎರಗುವರು = ಅಂಜವರು. (೧೨) ಬಲವಂದಳು = ಅಗ್ನಿಗೆ ಪ್ರದಕ್ಷಿಣೆಹಾಕಿ ನಮಸ್ಕಾರ ಮಾಡಿದಳು. ಅಭ್ರ = ಆಕಾಶ, ಭುವಿಯೋಳ್ = ಭೂಮಿಯಲ್ಲಿ. (೧೩) ಹಮ್ಮೈಸಿದನು = ಮೂರ್ಛೆ ಹೋದನು. (೧೪) ನಿಮೇಷದೃಷ್ಟಿ = ಕಣ್ಣುಮುಚ್ಚಿಕೊಂಡು, ಧನಂಜಯನ = ಅಗ್ನಿಯು. (೧೫) ಹಿಮಾನ್ವಿತರಸ = ತಣ್ಣೀರು, ನೇ-ವಣ =ಹಗ್ಗ, ನೇಣ, ಬೆಂಬಿಡದೆ = ತಪ್ಪದೆ, ಎಸಗಿದ+ಅಪವಾದಂಗಳು = ಎಬ್ಬಿಸಿದ ಕೆಟ್ಟಸುದ್ದಿಗಳು ಸಸಿನವಹುದು = ನೆಟ್ಟಗಾಗುವದು ಅಂದರೆ ಅ-ಪವಾದಗಳುಇಲ್ಲದಂತಾಗುವವು = ಸುಳ್ಳಾಗುವವು. (೧೬) ನಲಿಗಿದೆ = ಅಶಕ್ತಳಾದೆ, ಬಡಕಾದೆ, ವಾಯುಸಖಸುದರ = ಅಗ್ನಿಯಮಧ್ಯ, ಈಸ-ರಮೇಲೆ = ಇಷ್ಟರಮೇಲೆ. (೧೭) ಮೈಯಿಕ್ಕಲು = ನಮಸ್ಕಾರಮಾಡ-ಲು, ಅಪಸವ್ಯದಂಕ = ಬಲಗಡೆಯತೊಡೆ. (೧೭) ಮುಡಿಯ ನೇವರಿಸಿ-ದನು = ಮುಡಿಯನ್ನು ಕೈಯಿಂದ ನೆಟ್ಟಗೆ ಮಾಡಿದನು.



# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಾಠ-ಪದ | ಅಶುದ್ಧ | ಶುದ್ಧ |
|---|---|---|---|
| I | ಮೊದಲನುಡಿ | ಮಿಗಿಲಾವದು | ಮಿಗಿಲಾವದ್ದು |
| I | ,, | ಬಲತ | ಲಲಿತ |
| III | ,, | ಗೋಳಿಪಟ್ಟ | ಗೋಳಪಟ್ಟ |
| ೪ | ೧—೧೨ | ಹಸಿದಡಿಲ್ಯ | ಹಸಿದಡಿಲ್ಲ |
| ೫ | ೧—೨೦ | ನಿಲಿಸಾಗದೆ | ನಿಲಿಸಲಾಗದೆ |
| ೬ | ೧—೨೦ | ಹರಿಪ್ರೊತನಸು | ಹರಿಪೋತನನು |
| ೭ | ೨ | ಬೀಡಿಕೊಳ್ಳುವಸು | ಬೇಡಿಕೊಳ್ಳುವನು |
| ೮ | ೨—ಸಾಲು ೧ | ರಮುನನ್ನು | ರಾಮುನನ್ನು |
| ೧೨ | ೩-೫ | ಚರಿಯದಿಂ! | ಉಪಚರಿಯದಿಂ! |
| ೧೮ | ೪—೩ | ಹೋಗು | ಹೊಗು |
| ೨೨ | ೫—ಸಾಲು ೬ | ರಮೆಯಲ್ಲಿ | ಸರಮೆಯಲ್ಲಿ |
| ೨೪ | ೫—೭ | ತಗೆವವ | ತೆಗೆವವ |
| ೨೪ | ೫—೭ | ಶಿರದೊಳ | ಶಿರದೊಳಿ |
| ೨೪ | ೫—೮ | ವರದ | ವರವ |
| ೨೪ | ೫—೮ | ಸತಿಯರ | ಸತಿಯರು |
| ೨೫ | ೫—೧೨ | ತಂದರತಿ | ತಂದನತಿ |
| ೨೫ | ೫—೧೨ | ಸಮುಖದ | ಸಮ್ಮುಖದ |
| ೨೫ | ೫—೧೩ | ಭಂಟಸು | ಭಂಟನು |
| ೨೫ | ೫—೧೩ | ರಾತ್ರಿತರು | ರಾಶ್ರಿತರು |
| ೩೦ | ೬—ಸಾಲು ೪ | ಗೆದ್ದ | ಗೆದ್ದು |
| ೩೫ | ೭—ಸಾಲು ೧೩ | ದನ್ನು | ಅದನ್ನು |
| ೩೭ | ೭—೯ | ರಾಜಿ | ರಾಜ |

| | | | |
|---|---|---|---|
| ೩೯ | ೭—೧೫ | ನಾಟಕೆ | ನಾಟಕ |
| ೪೦ | ೭—ಸಾಲು ೪ | ಪಾಶ್ಚಿಮಾತ್ಯಶಾಸ್ತ್ರ | ಪಾಶ್ಚಿಮಾತ್ಯಶಾಸ್ತ್ರಿ |
| ೪೧ | ೮—೨ | ನುಳಿದೆಂದ | ನುಳಿಯೆಂದ |
| ೫೧ | ೯—೨೫ | ನೀರನಲಾದ | ನೀರಿನಲಾದ |
| ೬೦ | ೧೦—೩ | ವರಸುತದೆ | ವರಿಸುತದೆ |
| ೬೦ | ೧೦—ವಚನ ಸಾಲು೧ | ತ್ರಿಜಟಿರು | ತ್ರಿಜಟಿಯರು |
| ೬೨ | ೧೦—೧೦ | ಖರವಿರೊಧತ್ರಿಶಿರ | ಖರವಿರೋಧತ್ರಿದಶ |
| ೬೨ | ೧೦—೧೨ | ಜಯಜವಿಯ | ಜಯವಿಜಯ |
| ೬೬ | ೧೧—೩ | ಯಲ್ಲದ | ಯಿಲ್ಲದ |
| ೬೬ | ೧೧—೫ | ರೋವು | ರೋಷ |
| ೬೬ | ೧೧—೬ | ಬರ್ಶಿ | ಬರ್ಷಿ |
| ೬೬ | ೧೧—೬ | ಸ್ಫೂಲಿ | ಚ್ಫೂಲ |
| ೭೦ | ೧೧-೨೧ | ಕೂಡಿದಿಕ್ಕಿದನುಂ | ಕೂಡಿಕ್ಕಿದನು |
| ೭೦ | ೧೧—೨೨ | ದಡಿಕಿದನು | ದಡಕಿದನು |
| ೭೧ | ೧೧—೨೩ | ವಿತ್ತು | ವಿತ್ತ |
| ೭೩ | ೧೨—೪ | ಸೊಕ್ತಿ | ಸೊತ್ತಿ |
| ೭೬ | ೧೩—೭ | ಯರಸನನ | ಯರಸನ |
| ೭೮ | ೧೩ - ಅ ೧೫ | ದ್ವೈವ | ದೈವ |
| ೮೧ | ೧೩—ಬ ೮ | ತಾನೆ | ತಾರೆ |
| ೮೮ | ೧೪—೯ | ಹೊಗುವನಲ್ಲ | ಹೊಗುವವನಲ್ಲ |
| ೯೦ | ೧೪—೧೨ ವಚನ | ಸರಿಯಾವದು | ಸರಿಯಾದುದು |

## ಕಠಿಣ ಶಬ್ದಗಳ ಅರ್ಥದಲ್ಲಿ

| | | | |
|---|---|---|---|
| ೧೦೨ | ೧--೧೨ | ಇಲ್ಲಿ+ಅಲ್ಲ | ಇಲ್ಲ+ಅಲ್ಲಿ |

| | | | |
|---|---|---|---|
| ೧೦೪ | ೩–೧೮ | ಸ್ವಾಮಸಂಭವ | ಸಾಮಸಂಭವ |
| ೧೦೫ | ೪–೧೦ | ಹರ್ಯಕ್ಷ | (೧೦) ಹರ್ಯಕ್ಷ |
| ೧೦೬ | ೫–೪ | ದಲೋಕ | ಲೋಕದ |
| ೧೦೮ | ೮–೩ | ನಾಕನಿಳಯವ ಮಾಡಿದರು | ನಾಕನಿಳಯವ ಮಾಡದಿರೆ |
| ೧೦೮ | ೮–೩ | ಅವರನ್ನು ಸ್ವರ್ಗಕ್ಕೆ ಏರಿಸಿ ಮಾತಾಡಬೇಡ | ಸ್ವರ್ಗವನ್ನು ನನ್ನ ಮನೆಯಾಗಿ ಮಾಡದಿದ್ದರೆ |
| ೧೦೯ | ೯–೩ | ಜೀಕಂತ ಹಿಡಿಯು ಬೇಡ | ಜೀಕಂತ ಹಟಹಿಡಿ ಯಬೇಡ |
| ೧೧೧ | ೯–೨೧ | ನೆಲ ಹುಟ್ಟಿ ಹೊಂದುವ | ಹುಟ್ಟಿ ಹೊಂದುವ |
| ೧೧೧ | ೯–೨೧ | ಸುತ್ತು ದೊಡಕಿನ= ತೊಡರು | ಸುತ್ತು ದೊಡಕಿನ |
| ೧೧೧ | ೯–೨೭ | ನೆಲನ ವೈದೋರಿ ದನು | ನೆಲಸ .. ವೈದೋರಿ ದಸು |
| ೧೧೨ | ೧೦–೧೦ | ತ್ರಿರಶರ | ತ್ರಿದಶ |
| ೧೧೨ | ೧೦–೧೧ | ಮೂಗಸದಿರು | ಮೊಗಸದಿರು |
| ೧೧೩ | ೧೧–೬ | ಸೂಳಪಿಸಿ | ಸೂಳವಿಸಿ |
| ೧೧೩ | ೧೧–೧೮ | ವಿನನಾಕಹವ— | ವಿಟನಾಯಕನ |
| ೧೧೩ | ೧೧–೧೮ | ಸ್ವರ್ಗವಲ್ಲವಂಥನರಕ ವಾಸಿಗಳಾಗಬೇಡಿರಿ] | ವಿಟಗಾರನಾದರಾವಣ ನಂತೆನೀವೂಆಗಬೇಡಿರಿ |
| ೧೧೫ | ೧೩–೪ | ಹಿಳಿದು+ಅಳಿವಳು | ಹಿಳಿದು+ಅಳಿದಳು |
| ೧೧೫ | ೧೩–೪ | ಕೊಲ್ಲುವಳು | ಕೊಂದಳು |

**—: ಸಮಾಪ್ತ :—**

